# ಸ್ವಾತಂತ್ರ್ಯ ಹೋರಾಟ ಮತ್ತು ಜನಪದ ಸಾಹಿತ್ಯ

ಡಾ. ಬಸವರಾಜ ಮಲಶೆಟ್ಟಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**SWATANTRYA HORATA MATTU JANAPADA SAHITYA**
By Dr. Basavaraja Malashetti. Published by The Director, Prasaranga, Kannada University, Hampi, Vidyaranya, Kamalapura - 583 221
Pp: iv + 28, Rs. 5-00, First Impression: 1998

ಮಂಟಪ ಮಾಲೆ ೩೯



ಪ್ರಕಾಶಕರು
ಪ್ರೊ. ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

ಮುಖಪುಟ ವಿನ್ಯಾಸ
ಕೆ.ಕೆ.ಮಕಾಳಿ

ಅಕ್ಷರ ಜೋಡಣೆ
ಯಾಜಿ ಗ್ರಾಫಿಕ್ಸ್, ಹೊಸಪೇಟೆ

ಬೆಲೆ ರೂ. ೫.೦೦

ಮುದ್ರಣ
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಗದಗ

*

# ದೇಸಿಯೊಳ್ ಪುಗುವುದು

ಡಾ. ಎಂ. ಎಂ. ಕಲಬುರ್ಗಿ

ಕುಲಪತಿಗಳು

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ,ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು'ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಮೂಲತಃ ಸಮಾಜವೊಂದು ಸ್ವ-ರೂಪ, ಸ್ವ-ಭಾವ ವಿಶಿಷ್ಟವಾಗಿರುತ್ತದೆ. ಹೀಗಿದ್ದೂ ಅದು ತನ್ನಷ್ಟಕ್ಕೆ ತಾನು ಪ್ರತ್ಯೇಕವಾಗಿ ನಿಲ್ಲದೆ, ಅನ್ಯಸಂಸ್ಕೃತಿಗಳನ್ನು ಸ್ವೀಕರಿಸುತ್ತ, ನಿರಾಕರಿಸುತ್ತ ಒಮ್ಮೊಮ್ಮೆ ತಿರಸ್ಕರಿಸುತ್ತ ಮುಂದುವರಿಯುತ್ತದೆ. ಪ್ರಧಾನವಾಗಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶೀ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ಯ'ಗಳನ್ನು ಶೋಧಿಸುವುದು; ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶಗಳನ್ನು ಗುರುತಿಸುವುದು; ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯಸಂಸ್ಕೃತಿಯಿಂದ ಎಚ್ಚರ ವಹಿಸಿ ತುಂಬಿಕೊಳ್ಳುವುದು. ಒಟ್ಟಾರೆ ಅನ್ಯಸಂಸ್ಕೃತಿಗಳ ಸಹಯೋಗದಲ್ಲಿಯೂ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, 'ಎಲ್ಲ ರಸ್ತೆಗಳು ರೋಮ್‌ದ ಕಡೆಗೆ' ಎಂಬಂತೆ ಕನ್ನಡದ ಎಲ್ಲ ಹಾದಿಗಳು ಹಂಪಿಯ ಕಡೆಗೆ ಕೇಂದ್ರೀಕರಣಗೊಳ್ಳುವ ಮತ್ತು ಇಲ್ಲಿಂದಲೇ ಜಗತ್ತಿನ ಅಂಚಿನತ್ತ ವಿಕೇಂದ್ರೀಕರಣಗೊಳ್ಳುವ ವಾತಾವರಣವನ್ನು ನಿರ್ಮಾಣಮಾಡಬೇಕಾಗಿದೆ. ಈ ರೀತಿ ಐತಿಹಾಸಿಕ ಪರಂಪರೆ ಮತ್ತು ಭೌಗೋಳಿಕ ಪರಿಸರಗಳಲ್ಲಿ ಶ್ರಮಿಸಬೇಕಾಗಿರುವ ಕನ್ನಡ ವಿಶ್ವವಿದ್ಯಾಲಯ "ಎಂದೆಂದಿಗೂ ನೀ ಕನ್ನಡವಾಗಿರು" ಎಂಬ ಪ್ರಜ್ಞೆ ಕನ್ನಡಿಗರಲ್ಲಿ ಜಾಗೃತವಾಗಿರುವಂತೆಯೂ ನೋಡಿಕೊಳ್ಳಬೇಕಾಗಿದೆ.

ಈ ಎಲ್ಲ ನೆಲೆಗಳಲ್ಲಿ ಸೃಷ್ಟಿಯಾಗುವ ತನ್ನ ಶೋಧನೆ-ಚಿಂತನೆಗಳನ್ನು ದಾಖಲಿಸ ಬೇಕೆಂಬ ಮತ್ತು ಸಂವಹನಗೊಳಿಸಬೇಕೆಂಬ ತೀವ್ರ ಹಂಬಲದಿಂದ ಈ ವಿಶ್ವವಿದ್ಯಾಲಯ 'ಪ್ರಸಾರಾಂಗ' ಹೆಸರಿನ ಪ್ರಸಾರಮಾಧ್ಯಮ ಸಂಸ್ಥೆಯನ್ನು ಅಸ್ತಿತ್ವಕ್ಕೆ ತಂದಿದೆ. ಶ್ರವ್ಯ, ದೃಶ್ಯ, ವಾಚನ ಸಾಮಗ್ರಿಗಳ ಉತ್ಪಾದನೆ-ವಿತರಣೆ ಇತ್ಯಾದಿ ಕಾರ್ಯಗಳನ್ನು ಕೈಗೆತ್ತಿಕೊಂಡಿರುವ ಇದು, ವಾಚನ ಸಾಮಗ್ರಿಯಾಗಿರುವ ಪುಸ್ತಕಗಳ ಉತ್ಪಾದನೆಗೆ ವಿಶೇಷ ಕಾಳಜಿವಹಿಸಿದೆ. ಆಂತರಿಕ ಸತ್ವ, ಬಾಹ್ಯ ಸೌಂದರ್ಯಗಳಿಂದ ಕೂಡಿರುವ ವಿಶಿಷ್ಟ 'ಪುಸ್ತಕಸಂಸ್ಕೃತಿ'ಯನ್ನು ಅಸ್ತಿತ್ವಕ್ಕೆ ತರುತ್ತಲಿರುವ ಈ ಪ್ರಸಾರಾಂಗದ ಇತ್ತೀಚಿನ ಮಂಟಪ ಮಾಲೆಯ ಪುಸ್ತಕ 'ಸ್ವಾತಂತ್ರ್ಯ ಹೋರಾಟ ಮತ್ತು ಜನಪದ ಸಾಹಿತ್ಯ.'

ಡಾ. ಬಸವರಾಜ ಮಲಶೆಟ್ಟಿ ಅವರು ಸಂಕೇಶ್ವರದ ಕಲಾ ವಿಜ್ಞಾನ ಮಹಾವಿದ್ಯಾಲಯದಲ್ಲಿ 'ಸ್ವಾತಂತ್ರ್ಯ ಹೋರಾಟ ಮತ್ತು ಜನಪದ ಸಾಹಿತ್ಯ.' ಕುರಿತು ಮಂಟಪ ಮಾಲೆ ಉಪನ್ಯಾಸವನ್ನು ನೀಡಿದ್ದಾರೆ. ಇದಕ್ಕಾಗಿ ಅವರಿಗೆ ಕನ್ನಡ ವಿಶ್ವವಿದ್ಯಾಲಯ ಕೃತಜ್ಞವಾಗಿದೆ.

' ಲಾವಣಿ ' ಉತ್ತರ ಕರ್ನಾಟಕದ ಬೆಳಗಾಂವಿ, ಧಾರವಾಡ, ವಿಜಾಪುರ, ಬಾಗಲಕೋಟೆ, ಗುಲಬರ್ಗಾ ಮತ್ತು ಬೀದರ್ ಜಿಲ್ಲೆಗಳಲ್ಲಿ ಹೆಚ್ಚು ಪ್ರಚಾರದಲ್ಲಿರುವ ಒಂದು ಜನಪ್ರಿಯ ಗೀತಪ್ರಕಾರ. ಇದು ಮಹಾರಾಷ್ಟ್ರದಿಂದ ನಮ್ಮಲ್ಲಿಗೆ ಬಂದಿದೆ ಎಂಬುದು ನಿರ್ವಿವಾದ. ' ಲಾವಣಿ' ಶಬ್ದದ ನಿಷ್ಪತ್ತಿಯ ಬಗ್ಗೆ ಮರಾಠಿ ವಿದ್ವಾಂಸರ ಅಭಿಪ್ರಾಯಗಳು ಈ ರೀತಿಯಾಗಿವೆ : (೧) 'ಲೂ' ಎಂದರೆ ಕೊಯ್ಯುವುದು ಎಂದರ್ಥ. ಬೆಳೆ ಕೊಯ್ಯುವಾಗ ಹಾಡುವ ಹಾಡು ಲಾವಣಿಯೆನಿಸಿತು. (೨) 'ಲವಣ' ವೆಂದರೆ ಸೌಂದರ್ಯ. ಸ್ತ್ರೀಯರ ಸೌಂದರ್ಯವನ್ನು ಕುರಿತು ಹಾಡುವ ಹಾಡು ಲಾವಣಿಯಾಯಿತು. (೩) 'ಲಾವಣಿ' ಎಂದರೆ ಬಿತ್ತಿಗೆ. ಹೊಲದಲ್ಲಿ ಬಿತ್ತಿಗೆ ಮಾಡುವಾಗ ಹಾಡುವ ಹಾಡೇ ಲಾವಣಿಯೆನಿಸಿತು. (೪) ' ಲಾವಣಿ ' ಎಂದರೆ ' ಮಾಂಡಣೆ '. ಮಂಡಿಸುವುದು ರಚಿಸುವುದು ಎಂದು ಇದರರ್ಥ. ಹೀಗಾಗಿ ವ್ಯವಸ್ಥಿತ ಪದರಚನೆಯೇ ಲಾವಣಿಯಾಯಿತು. ಈ ಯಾವ ನಿಷ್ಪತ್ತಿಗಳೂ ತೃಪ್ತಿದಾಯಕವಾಗಿಲ್ಲ. ಇವು ಊಹೆ ಅಜ್ಞಾನ ಭ್ರಮೆಗಳಿಂದ ಕೂಡಿಕೊಂಡಿವೆಯೆಂಬುದು ಪಂಡಿತರ ತೀರ್ಮಾನ. ನಿಷ್ಪತ್ತಿ ಏನೇ ಇರಲಿ, ಲಾವಣಿಯೆಂಬುದು ಶೃಂಗಾರ, ವೀರ, ಆಧ್ಯಾತ್ಮ ವಸ್ತುವನ್ನೊಳಗೊಂಡ ಒಂದು ಗೀತಪ್ರಕಾರವೆಂಬುದು ಸ್ಪಷ್ಟವಿದೆ.

ಕ್ರಿ. ಶ ೧೭೫೦ - ೧೮೫೦ ಇದು ಮರಾಠಿ ಲಾವಣಿಯ ಸುವರ್ಣಯುಗ. ಲಾವಣಿ ದಿಗ್ಗಜರಾದ ಹೋನಾಜಿ ಬಾಳ, ರಾಮಜೋಷಿ, ಪ್ರಭಾಕರ, ಪರಶುರಾಮ ಮುಂತಾದವರು ಈ ಅವಧಿಯಲ್ಲಿ ಲಾವಣಿ ರಚಿಸಿ ಆ ಪ್ರಕಾರಕ್ಕೆ ಶಾಶ್ವತ ಸ್ಥಾನವನ್ನು ಕಲ್ಪಿಸಿಕೊಟ್ಟರು. ಲಾವಣಿ ಬೆಳವಣಿಗೆಗೆ ಪೇಶ್ವೆ ಆಡಳಿತ ಪ್ರೋತ್ಸಾಹ ನೀಡಿದ್ದು ಸ್ಪಷ್ಟವಿದೆ. ಹಾಗೆ ನೋಡಿದರೆ ಇದು ಪೇಶ್ವೆಯವರ ಉನ್ನತಿಯ ಕಾಲವಲ್ಲ. ಜಡತನ ಮತ್ತು ವಿಪರೀತ ವಿಲಾಸಗಳನ್ನು ಮೈಗೂಡಿಸಿಕೊಂಡಿದ್ದ ಅವನತಿಯ ಕಾಲವಾಗಿತ್ತು. ಅಂಥ ಸಂದರ್ಭದಲ್ಲಿ ಹೊಸ ಗೀತ ಪ್ರಕಾರವೊಂದು ಸಮೃದ್ಧವಾಗಿ ಬೆಳೆದುದು ಅಚ್ಚರಿಯ ಸಂಗತಿಯೇ. ಅಂದಿನ ಸೈನಿಕರ ಮನರಂಜನೆಗಾಗಿ 'ತಮಾಶಾ' ರಂಗ ಪ್ರಕಾರ ರೂಢಿಗೆ ಬಂದಿತು. ಹಾಡು ಕುಣಿತಗಳನ್ನು ಪ್ರಧಾನವಾಗಿಟ್ಟುಕೊಂಡು ಶೃಂಗಾರ ಹಾಸ್ಯಗಳನ್ನು ಲೀಲಾಜಾಲವಾಗಿ ಹೊರಹೊಮ್ಮಿಸುವ ತಮಾಶಾ ಸೈನಿಕ ಪ್ರೇಕ್ಷಕರಿಗೆ ತುಂಬಾ ಮೆಚ್ಚುಗೆಯಾಯಿತು. ಹೆಂಡತಿ – ಪ್ರೇಯಸಿಯರನ್ನು ಅಗಲಿ ವಿರಹತಾಪದಿಂದ ಹಪಹಪಿಸುತ್ತಿದ್ದ ಸೈನಿಕರ ಮನಸ್ಸಿಗೆ ಮುದ ನೀಡಿಲು ಶೃಂಗಾರವನ್ನು ಧಾರಾಳವಾಗಿ ಬಳಸಲಾಯಿತು. ಅದರಲ್ಲಿಯೂ ಸಂಯೋಗ ಶೃಂಗಾರದ ಹಾಡು ಅಭಿನಯಗಳು ಅವರ ಸುಪ್ತ ಕಾಮನೆಗಳಿಗೆ ಕಚಗುಳಿ ಇಟ್ಟು ಖುಷಿ ನೀಡಿದವು. ತಮಾಶಾ ರಂಗ ಪ್ರಯೋಗದಲ್ಲಿ ಮೂರು ಹಂತಗಳು. ಆರಂಭದಲ್ಲಿ ಗಣ – ಗೌಳಣ. ಗಣಪತಿ ಸ್ತುತಿ ಮತ್ತು ಗೋಪಿಕಾಸ್ತ್ರೀ – ಕೃಷ್ಣರ ನಡುವಿನ ಸರಸ ಸಂಭಾಷಣೆ ಇಲ್ಲಿರುತ್ತದೆ. ಮಧ್ಯದಲ್ಲಿ ಲಾವಣಿ. ಶೃಂಗಾರ ಪದಗಳ ಸಾಭಿನಯ ನಿರೂಪಣೆಯ ಭಾಗ. ಮೂರನೆಯದು ವಗ. ಯಾವುದಾದರೂ ಕಥಾ ಪ್ರಸಂಗ ಇಲ್ಲಿರುವುದು. ಲಾವಣಿ ತಮಾಶಾದ ಒಂದು ಮುಖ್ಯ ಅಂಗವಾಗಿ ಬೆಳೆದುದು ಗಮನಾರ್ಹ ಅಂಶ. ಈ ಮೊದಲು ವೀರಕಾವ್ಯ 'ಪೊವಾಡಾ' ರಚಿಸುತ್ತಿದ್ದ ಮಧ್ಯಮವರ್ಗದ ಕವಿಗಳು ಪರಿಸ್ಥಿತಿಯ ಒತ್ತಡಕ್ಕೆ ತಲೆಬಾಗಿ ತಮಾಶಾ ತಂಡಗಳಿಗೆ ಲಾವಣಿಗಳನ್ನು ಬರೆದು ಕೊಡಲಾರಂಭಿಸಿದರು. ರಾಮ ಜೋಷಿಯಂಥ ಬ್ರಾಹ್ಮಣ ಕವಿಗಳಿಗೆ ಮೊದಮೊದಲು ಇದು ಮುಜುಗರದ ವಿಷಯವಾಗಿದ್ದರೂ ನಂತರ ಮೈಚಳಿ ಬಿಟ್ಟು ತಮಾಶಾ ತಂಡಗಳ ಆಶೋತ್ತರಗಳನ್ನು ಪೂರೈಸಿದರು. ಹೀಗೆ ಲಾವಣಿ ತಮಾಶಾದ ಒಂದು ಅಂಗವಾಗಿ ಬೆಳೆದು ಬಂದಿತು. ಆರಂಭದಲ್ಲಿ ಲಾವಣಿ ಕವಿಗಳು ಶೃಂಗಾರ ರಚನೆಗಳೊಂದಿಗೆ ಸ್ಥಳೀಯ ಸಂತರ ಭಕ್ತ ಜೀವನದ ಬಗ್ಗೆ ಪೌರಾಣಿಕ ವ್ಯಕ್ತಿಗಳ ಆದರ್ಶಗಳ ಬಗ್ಗೆ ಆಧ್ಯಾತ್ಮ ವಿಚಾರಗಳ ಬಗ್ಗೆ ಲಾವಣಿಗಳನ್ನು ರಚಿಸಿದರೂ ಶೃಂಗಾರ ಮುಂದೆ ನಿಂತಿದ್ದರಿಂದ ಇವು ಹಿಂದೆಸರಿದು ನಿಲ್ಲಬೇಕಾಯಿತು. ಲಾವಣಿಯೆಂದರೆ ಶೃಂಗಾರ ಪದಗಳು ಎಂಬ

ಸಾಮಾನ್ಯ ಅರ್ಥ ಸ್ಥಿರಗೊಂಡಿತು. ಶೃಂಗಾರ ಲಾವಣಿಗಳಲ್ಲಿ ವಿವಾಹೇತರ ಉನ್ಮತ್ತ ಪ್ರಣಯ ಪ್ರಖರವಾಗಿ ನಿರೂಪಿತವಾಗಿದೆ. ತಿಂಗಳಾನುಗಟ್ಟಲೆ ಅಗಲಿಕೆಯ ತಾಪದಿಂದ ಪರಿತಪಿಸುತ್ತಿದ್ದ ಸೈನಿಕನ ಹೆಂಡತಿ ಪ್ರೇಮಿಯೊಬ್ಬನನ್ನು ದೊರೆಕಿಸಿಕೊಳ್ಳುವುದೋ ಅಥವಾ ಅಂಥದಕ್ಕಾಗಿ ಹೊಂಚು ಹಾಕುತ್ತಿದ್ದ ಉಡಾಳನೊಬ್ಬನ ಬಲೆಗೆ ಬಿದ್ದು ಸುಖಿಸುವುದೋ ಲಾವಣಿಗೆ ವಸ್ತುವಾದುದು ಸಹಜ. ಹೀಗಾಗಿ ಹಾದರ ಒಂದು ಹಂತದಲ್ಲಿ ವೈಭವೀಕರಿಸಲ್ಪಟ್ಟಿತು. ಅದೇ ಕ್ಷಣದಲ್ಲಿ ಇಂಥ ಮನೋಭಾವಕ್ಕೆ ಪ್ರತಿಭಟನೆಯಾಗಿ ಪತಿವ್ರತಾ ಧರ್ಮವನ್ನು ಜಾಗೃತಗೊಳಿಸಲು ಪುರಾಣಕಾಲದ ಮಹಿಳೆಯರ ಆದರ್ಶ ಜೀವನವನ್ನು ರಸವತ್ತಾಗಿ ಪರಿಣಾಮಕಾರಿಯಾಗಿ ನಿರೂಪಿಸುವಂಥ ಲಾವಣಿಗಳೂ ಹುಟ್ಟಿಕೊಂಡವು. ಶಿಥಿಲಗೊಳ್ಳುತ್ತಿದ್ದ ನೈತಿಕ ಜೀವನದ ಬಗ್ಗೆ ಆತಂಕ ಮತ್ತು ಪರಂಪರಾಗತ ಮೌಲ್ಯಗಳ ಸಮರ್ಥನೆ – ಪ್ರತಿಪಾದನೆ ಈ ರಚನೆಗಳ ಉದ್ದೇಶವಾಗಿತ್ತು. ಶೃಂಗಾರ ಲಾವಣಿಗಳ ನಾಯಕ ನಾಯಕಿಯರು ಅಚ್ಚ ಗ್ರಾಮೀಣರಲ್ಲ. ನಾಗರಿಕ ಭಾವನೆ ಶಿಷ್ಟಾಚಾರಗಳನ್ನು ಬಲ್ಲವರು. ಅಂದರೆ ನಗರದವರು. ಮರಾಠಿ ಲಾವಣಿಕಾರರ ಒಂದು ಗಮನಾರ್ಹ ಪ್ರವೃತ್ತಿಯೇನೆಂದರೆ ಅವರು ಸಮಕಾಲೀನ ಸ್ಥಿತಿಗೆ ಸ್ಪಂದಿಸದೇ ಇದ್ದುದು. ೧೭೫೦-೧೮೫೦ ಇದು ಮರಾಠಿ ಲಾವಣಿ ಸಾಹಿತ್ಯದ ಸುವರ್ಣಯುಗವೆಂದು ತಿಳಿಯಲಾಗಿದೆ. ರಾಜಕೀಯವಾಗಿ ಈ ಕಾಲಾವಧಿ ಮಹಾರಾಷ್ಟ್ರದ ಚರಿತ್ರೆಯಲ್ಲಿ ಅವನತಿಯ ಲಕ್ಷಣಗಳನ್ನೊಳಗೊಂಡಿರುವಂಥದು. ೧೮ ನೇ ಶತಮಾನದ ಉತ್ತರಾರ್ಧದಿಂದ ಪೇಶ್ವೆಯರು ವಿಪರೀತ ಉನ್ಮತ್ತ ವಿಲಾಸಿಜೀವನದಲ್ಲಿ ಮುಳುಗಿ ನಿಷ್ಕ್ರಿಯರಾಗುತ್ತ ಬಂದರು. ಕೊನೆಗೆ ೧೮೧೮ ರಲ್ಲಿ ತಮ್ಮ ಅಧಿಕಾರ ಕಳೆದುಕೊಂಡು ಬ್ರಿಟಿಷರಿಗೆ ಶರಣಾಗತರಾದರು. ಇದು ಇಡೀ ಮಹಾರಾಷ್ಟ್ರದ ಮೇಲೆ ಅಪಮಾನ – ವಿಷಾದಗಳ ನೆರಳು ಚೆಲ್ಲಿತು. ಆದರೆ ಇದೇ ಅವಧಿಯಲ್ಲಿ ಲಾವಣಿ ರಚಿಸಿದ ಪ್ರಮುಖರ ಮೇಲೆ ಈ ನೆರಳು ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ. ಅವರು ಸಮೃದ್ಧ ಕಾಲದಲ್ಲಿದ್ದವರಂತೆಯೇ ಪೇಶ್ವೆಯರ ವೈಭವವನ್ನು ಹೊಗಳುತ್ತ ಸಂತೃಪ್ತ ಶೃಂಗಾರ ಜೀವನವನ್ನು ಚಿತ್ರಿಸಿದರು.

ಆರಂಭ ಕಾಲದ ಮರಾಠಿ ಲಾವಣಿಕಾರರು ವಾಗ್ಗೇಯಕಾರರಾಗಿದ್ದರು. ತಮ್ಮ ರಚನೆಗಳಿಗೆ ತಾವೇ ಸಂಗೀತ ಸಂಯೋಜನೆ ಮಾಡುತ್ತಿದ್ದರು. ಅವರೆಲ್ಲರಿಗೆ ಸಂಗೀತದ ಪರಿಜ್ಞಾನವಿತ್ತು. ಅವರ ಪ್ರಯತ್ನದ ಫಲವಾಗಿ 'ಲಾವಣಿ ಸಂಗೀತ' ಎಂಬ ಹೊಸ ಸಂಗೀತ ಶೈಲಿ ರೂಢಿಗೆ ಬಂದಿತು. ಶಾಸ್ತ್ರೀಯ ಸಂಗೀತವನ್ನಾಧರಿಸಿದ ಮತ್ತು ತನ್ನಲ್ಲಿ ದೇಸೀ ಧಾಟಿಗಳನ್ನು ಅಳವಡಿಸಿಕೊಂಡ ಈ ಲಾವಣಿ ಸಂಗೀತ ಸಂಗೀತಕ್ಷೇತ್ರಕ್ಕೆ ನೀಡಿರುವ ಕೊಡುಗೆ ಗಮನಿಸತಕ್ಕದ್ದು. ಹೋನಾಜಿ ಬಾಳ ತನ್ನ ಲಾವಣಿಗಳಿಗೆ ತಾನೇ ರಾಗ ಸಂಯೋಜನೆ ಮಾಡುತ್ತಿದ್ದ. ಅದೇ ಪರಂಪರೆ ಮುಂದುವರೆಯಿತು. ನಂತರದವರು ರಾಗಸಂಯೋಜನೆಯಲ್ಲಿ ಅಷ್ಟೊಂದು ಪರಿಣತರಾಗಿರದ ಕಾರಣ ಹಿಂದಿನ ಧಾಟಿಗಳೇ ಅನುಕರಣದ ಮೂಲಕ ಚಲಾವಣೆಗೆ ಬಂದವು. ಲಾವಣಿ ಸಂಗೀತ ಅಚ್ಚ ಜನಪದ ಸಂಗೀತವಲ್ಲ. ಅದು ಮಾರ್ಗ ಮತ್ತು ದೇಸೀ ಗುಣಾಂಶಗಳ ಹೃದ್ಯ ಸಮ್ಮಿಶ್ರಣವಾಗಿದೆ.

ಲಾವಣಿಯಲ್ಲಿ ಶೃಂಗಾರ ಸ್ಥಾಯಿಯಾಗಿದ್ದರೂ ಭಕ್ತಿ – ವೇದಾಂತಗಳು ಪೂರಕವಾಗಿ ಬೆಳೆದು ಬಂದವು. ಹಾಡುಗಾರಿಕೆಯಲ್ಲಿ ವಿವಿಧ ತಂತ್ರಗಳು ಮೈದೋರಿದವು. ಇವುಗಳಲ್ಲಿ ಕಲ್ಗಿ – ತುರಾ ಒಂದು. ಶಿವ – ಶಕ್ತಿ, ಗಂಡು – ಹೆಣ್ಣು, ಪ್ರಕೃತಿ – ಪುರುಷ ಇವರ ಮಧ್ಯೆ ಕಲ್ಪಿತ ಶ್ರೇಷ್ಠತಾ ಪ್ರತಿಪಾದನೆ ಬೆಳೆದು ಬಂದಿತು. ನೀರಸವೆನಿಸಬಹುದಾಗಿದ್ದ ಈ ತಾತ್ವಿಕ ಚರ್ಚೆ ಲವಲವಿಕೆಯ ಪ್ರಸಂಗವಾಗಲು ಲಾವಣಿಕಾರರ ಜಾಣ್ಮೆಯೇ ಕಾರಣ. ತರ್ಕ – ಕುತೂಹಲಗಳ ಮೂಲಕ ವಾದಿ – ಪ್ರತಿವಾದಿ ರೂಪದಲ್ಲಿ ನಡೆಯುವ

ಹಾಡಿನ ಸ್ಪರ್ಧೆ ರಸವತ್ತಾಗಿರುತ್ತದೆ. ಒಂದು ಪಕ್ಷದವರು ಒಂದು ಒಗಟಿನ ರೂಪದ ಹಾಡು ಹಾಡಿದರೆ ಎದುರು ಪಕ್ಷದವರು ಹಾಡಿನಲ್ಲಿಯೆ ಆ ಒಗಟಿಗೆ ವಿವರಣೆ ನೀಡುತ್ತಾರೆ. ಹೀಗಾಗಿ ಈ ಲಾವಣೆಗೋಷ್ಠಿ ಒಮ್ಮೊಮ್ಮೆ ಸವಾಲ್ – ಜವಾಬ್ ಗೋಷ್ಠಿಯಾಗಿರುತ್ತದೆ. ಈ ಗೋಷ್ಠಿಯ ಮೇಳಗಳಿಗೆ ಕಲಗಿ – ತುರಾ ಅಥವಾ ಹರದೇಸಿ – ನಾಗೇಶಿ ಎಂದು ಹೆಸರು. ಕಲಗಿವಾಲೆ ಶಕ್ತಿಯ ಪರವಾಗಿದ್ದರೆ ತುರೇವಾಲೆ ಶಿವನಪರವಾಗಿರುತ್ತದೆ. ಕಲಗಿ – ತುರಾ ಶಬ್ದಗಳ ನಿಷ್ಪತ್ತಿ ಇನ್ನೂ ಅಸ್ಪಷ್ಟವಾಗಿದೆ. ಅಸಾಧ್ಯವಾಗಿದೆ. ಇದಕ್ಕೆ ಸಮಾಧಾನ ಹೇಳುವ ಪರಂಪರೆಯಿಂದ ಬಂದಿರುವ ಆಖ್ಯಾಯಿಕೆ ಹೀಗಿದೆ – ಅಕಬರನ ಆಸ್ಥಾನದಲ್ಲಿ ಶಹಾಅಲಿ ಮತ್ತು ತುಕನ್ ಗೀರ್ ಎಂಬ ಇಬ್ಬರು ಲಾವಣಿಕಾರರಿದ್ದರು. ಅಕಬರ ಶಹಾಅಲಿಗೆ ತನ್ನ ಕಿರೀಟದಲ್ಲಿ ಧರಿಸಿದ ಕಲ್ಗಿ ( ಹಕ್ಕಿಯ ಗರಿ) ಯನ್ನು ತುಕನ್ ಗೀರ್‌ಗೆ ತುರಾ (ಹೂವಿನ ಗುಚ್ಛವನ್ನು) ಬಹುಮಾನವಾಗಿ ನೀಡಿದನು. ಅಂದಿನಿಂದ ಕಲ್ಗಿ – ತುರಾ ಪರಂಪರೆಗಳು ಬೆಳೆದು ಬಂದವು. ಹೀಗೇ ಹರದೇಸಿ – ನಾಗೇಶಿಗಳ ನಿಷ್ಪತ್ತಿಯನ್ನು ಊಹಿಸಲಾಗಿದೆ. ಹರದಾಸ್> ಹರದೇಸಿಯಾಗಿದೆಯಂತೆ. ೧೮ನೇ ಶ. ಪ್ರೊವಾಡಾ ಕವಿ ಅಜ್ಞಾನಸಿದ್ಧನ ಗುರು ನಾಗನಾಥನೆಂಬವನಿದ್ದ. ಅವನಿಂದ ನಾಗೇಶಿ ಪಕ್ಷ ಬೆಳೆಯಿತೆಂದು ಹೇಳಲಾಗುತ್ತಿದೆ. ಈ ಕಲ್ಗಿ – ತುರಾ ಮತ್ತು ಹರದೇಸಿ – ನಾಗೇಶಿಗಳು ಕನ್ನಡಕ್ಕೆ ನೇರವಾಗಿ ಬಂದು ಸೇರಿಕೊಂಡಿವೆ.

ಕರ್ನಾಟಕದಲ್ಲಿ ಲಾವಣಿ ಎಂದಿನಿಂದ ಬೆಳೆದು ಬಂದಿತು ? ವಿದ್ವಾಂಸರ ಒಂದು ಅಭಿಪ್ರಾಯ ಹೀಗಿದೆ – ೧೬೫೦ ರ ಸುಮಾರಿಗೆ ಇದ್ದ ಗುಣಚಂದ್ರನ ಛಂದಸ್ಸಾರ ಎಂಬ ಛಂದೋ ಗ್ರಂಥದಲ್ಲಿ

ಲಘುಗಳ ಮಿಳಿತವ ಮಾಡಿ
ಕೊನೆಯಲಿ ಗುರುಗಳ ಹೂಡಿ
ಅರ್ಥದ ಸಾರವ ನೋಡಿ
ಪ್ರಾಸನು ಕೊನೆಯಲಿ ಕೂಡಿ
ಪಾದ ಮಿತಿಯ ಬೀಸಾಡಿ
ಲಾವಳಿ ಕೃತಿಗಳ ಪಾಡಿ

ಎಂದಿದೆ. ಳ > ಣ ಆಗುವ ಪ್ರಕ್ರಿಯೆ ಸಾಮಾನ್ಯವಾಗಿರುವುದರಿಂದ ಗುಣಚಂದ್ರನು ಇಲ್ಲಿ ಲಾವಣಿಯ ಬಗ್ಗೆಯೇ ಹೇಳಿದ್ದಾನೆಂದು ನಂಬಬೇಕು. ಅವನ ಹೇಳಿಕೆಯ ಪ್ರಕಾರ ಲಾವಣಿ ಲಘುಗಳ ಕೂಡಿಕೆ, ಕೊನೆಯಲ್ಲಿ ಗುರು ಅವಶ್ಯ. ಅರ್ಥಪೂರ್ಣವಾದ ರಚನೆಯಾಗಿರುತ್ತದೆ. ಕೊನೆಯಲ್ಲಿ ಪ್ರಾಸವಿರುವುದು, ಪಾದಗಳ ಮಿತಿ ಇಲ್ಲ ಇತ್ಯಾದಿ. ಇಲ್ಲಿಯ ಕೆಲವು ಅಂಶಗಳು ಅರ್ಥಹೀನ ಅನಿಸುತ್ತವೆ. ಅಥವಾ ಲಾವಣಿಯನ್ನೇ ದೃಷ್ಟಿಯಲ್ಲಿಟ್ಟುಕೊಂಡು ಅನ್ವಯಿಸಲು ಹೋದಾಗ ಅರ್ಥ ಕಳೆದುಕೊಳ್ಳುತ್ತವೆ. ಕೊನೆಯಲ್ಲಿ ಗುರು ಬರಬೇಕೆಂಬುದು ಸಹಜ. ಹಾಡುವಾಗ ಕೊನೆಯ ಅಕ್ಷರ ಲಘುವಿದ್ದರೂ ಗುರುವಾಗುತ್ತದೆ. ಉಳಿದಲ್ಲೆಲ್ಲ ಲಘು ಬರಬೇಕೆಂದರೆ ಏನು ಅರ್ಥ? ಬಳಸುವ ಶಬ್ದಗಳಲ್ಲಿ ಲಘು ಗುರುಗಳು ಬೆರೆತುಕೊಂಡಿರುತ್ತವೆ. ಗುರು ಬಿಟ್ಟು ಲಘುಮಾತ್ರವಿರುವಂಥ ಪದ್ಯ ರಚನೆ ಎಷ್ಟರಮಟ್ಟಿಗೆ ಸಾಧ್ಯ ? ಯಾವುದೇ ಪದ್ಯ ಅರ್ಥದ ಸಾರದ ಕಡೆಗೆ ಗಮನ ಕೊಟ್ಟೇ ಕೊಡುತ್ತದೆ. ಹೀಗಾಗಿ ಇದು ನಿಜವಾಗಿಯೂ ಲಾವಣಿಯ ಲಕ್ಷಣ ಹೇಳುತ್ತಿದೆಯೇ ಎಂಬ ಬಗ್ಗೆ ಅನುಮಾನ ಸುರು ಆಗುತ್ತದೆ. ಲಾವಳಿ ಏನಾಗಿತ್ತೋ ಏನೋ ! ಆದರೆ ಗುಣಚಂದ್ರನು ಹೇಳುತ್ತಿರುವುದು ಲಾವಣಿಯ ಬಗ್ಗೆ ಖಂಡಿತವಾಗಿಯೂ

ಅಲ್ಲ. ಲಾವಣಿ ಒಂದು ಅರೆ ಜಾನಪದ ಗೀತ ಪ್ರಕಾರ. ಧಾಟಿಯನ್ನೇ ಆಧರಿಸಿಕೊಂಡಿರುವ ಹಾಡಿನ ರಚನೆ. ಇಂಥ ಶೈಲಿಯ ಹಾಡುಗಳು ಛದಂಸ್ಸಿನ ಬಂಧನಕ್ಕೆ ಸಿಗಲಾರದಂಥವು. ಲಾವಣಿ ಮರಾಠಿಯಿಂದ ಕನ್ನಡಕ್ಕೆ ಬಂದಿದೆಯೆಂಬುದು ಸ್ಪಷ್ಟವಾಗಿದೆ. ಮರಾಠಿ ಲಾವಣಿ ಸಾಹಿತ್ಯದ ಸುವರ್ಣಯುಗ ೧೭೫೦-೧೮೫೦. ಅಲ್ಲಿ ಜನಪ್ರಿಯಗೊಂಡ ಲಾವಣಿ ಕರ್ನಾಟಕಕ್ಕೆ ಬರಲು ಕೆಲವು ವರ್ಷಗಳಾದರೂ ಬೇಕಲ್ಲವೇ? ಅಂದ ಮೇಲೆ ೧೬೫೦ ರಲ್ಲಿದ್ದ ಗುಣಚಂದ್ರನು ಇನ್ನೂ ಕಣ್ಣುತೆರೆಯದಿದ್ದ ಲಾವಣಿಯ ಬಗ್ಗೆ ಹೇಳಿರುವ ಸಾಧ್ಯತೆ ಇಲ್ಲವೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಸದ್ಯಕ್ಕೆ ಲಭ್ಯವಿರುವ ದಾಖಲೆಗಳ ಪ್ರಕಾರ ಲಾವಣಿ ೧೮೩೦ ರಿಂದ ಈಚೆಗೆ ಕನ್ನಡದಲ್ಲಿ ಬೆಳೆದು ಬಂದಿದೆ.

ಮಹಾರಾಷ್ಟ್ರದಿಂದ ಬಂದ ಲಾವಣಿ ಕರ್ನಾಟಕದ ಗಡಿ ಜಿಲ್ಲೆಗಳಲ್ಲಿ ಸಮೃದ್ಧವಾಗಿ ಬೆಳೆಯಿತು. ಪೇಶ್ವೆಯರ ಕಾಲದಿಂದಲೂ ಈ ಭಾಗದ ಜನತೆಗೆ ಮರಾಠಿ ಭಾಷೆ ಸಂಸ್ಕೃತಿಗಳು ತೀರಾ ಪರಿಚಿತವಾಗಿದ್ದವು. ಪೇಶ್ವೆಯರ ನಂತರ ಬ್ರಿಟಿಷರು ಉತ್ತರಕರ್ನಾಟಕವನ್ನು ದಕ್ಷಿಣ ಮಹಾರಾಷ್ಟ್ರ ಎಂದು ಕರೆಯುವ ಮಟ್ಟಿಗೆ ಇದು ಮರಾಠಿಮಯವಾಗಿತ್ತು. ಈ ಭಾಗದ ವಿದ್ಯಾವಂತರಿಗೆಲ್ಲ ಮರಾಠಿ ಚೆನ್ನಾಗಿ ಬರುತ್ತಿತ್ತು. ಹೀಗಾಗಿ ಲಾವಣಿಯ ಓದು–ಕೇಳಿಕೆಗಳು ತೀರಾ ಸಹಜವೆನಿಸಿದವು. ಕನ್ನಡದ ಆರಂಭದ ಲಾವಣಿಕಾರರು ಮರಾಠಿಬಲ್ಲವರಾಗಿದ್ದರೆಂಬುದರಲ್ಲಿ ಸಂಶಯವಿಲ್ಲ. ಅಂದು ಕನ್ನಡ ಪ್ರಾಥಮಿಕ ಶಾಲಾ ಶಿಕ್ಷಣವೇ ಹೆಚ್ಚಿನದಾಗಿತ್ತು. ಜೊತೆಗೆ ವೇದಾಂತ ಪುರಾಣ ಶಾಸ್ತ್ರಗಳನ್ನು ಅಷ್ಟಿಷ್ಟು ಓದಿಕೊಂಡಿದ್ದರಿಂದ ಲಾವಣಿಯ ರಚನೆಗೆ ಬೇಕಾದ ಅರ್ಹತೆ ಪಡೆದುಕೊಂಡಿದ್ದರು. ಹೊಸ ಗೀತ ಪ್ರಕಾರ ಅವರನ್ನು ಆಕರ್ಷಿಸಿತು. ಅವರು ಉತ್ಸಾಹದಿಂದ ಲಾವಣಿ ರಚಿಸಿದರು. ಕನ್ನಡದಲ್ಲಿ ೧೮೩೦ ರ ಸುಮಾರಿಗೆ ಲಾವಣಿ ರಚನೆ ಪ್ರಾರಂಭವಾಗಿರಬಹುದು. ಫ್ಲೀಟರು ಸಂಗ್ರಹಿಸಿದ ಸಂಗೊಳ್ಳಿರಾಯಣ್ಣನ ಲಾವಣಿಯೇ ಈಗ ಉಪಲಬ್ಧ ಪ್ರಾಚೀನ ಲಾವಣಿ. ೧೮೩೧ ರಲ್ಲಿ ರಾಯಣ್ಣನನ್ನು ಗಲ್ಲಿಗೇರಿಸಲಾಯಿತು. ಈ ಘಟನೆ ನಡೆದ ಕೂಡಲೇ ಜನಮನದಲ್ಲಿ ತುಂಬಿ ನಿಂತಿದ್ದ ರಾಯಣ್ಣನ ಬಗ್ಗೆ ಲಾವಣಿ ರಚನೆಗೊಂಡಿರಬೇಕು. ಇದನ್ನು ಬರೆದವ ಹೆಬ್ಬಳ್ಳಿ ಪುಂಡ ಬಸವ. ಸಧ್ಯಕ್ಕೆ ಅವನೇ ಕನ್ನಡದ ಮೊದಲ ಲಾವಣಿಕಾರ.

ಕನ್ನಡದಲ್ಲಿ ಲಾವಣಿ ಪ್ರಾರಂಭವಾದುದು ವಿಶಿಷ್ಟ ಧೋರಣೆಯಿಂದ. ಮರಾಠಿಯಿಂದಲೇ ಕನ್ನಡಕ್ಕೆ ಲಾವಣಿ ಬಂದಿದ್ದರೂ ಅವೆರಡರ ಆರಂಭಿಕ ಕೃಷಿ ಭಿನ್ನವಾಗಿದೆ. ಮರಾಠಿ ಲಾವಣಿ ತಮಾಶಾದ ಒಂದು ಭಾಗವಾಗಿ ಶೃಂಗಾರ ಪ್ರಧಾನ ಗೀತಪ್ರಕಾರವಾಗಿ ಬೆಳೆದು ಬಂದಿತು. ಕನ್ನಡದಲ್ಲಿ ಅದು ಒಂದು ಸ್ವತಂತ್ರ ಗೀತಪ್ರಕಾರವಾಗಿ ಬೆಳೆಯಿತು. ಶೃಂಗಾರ ಇಲ್ಲಿ ಅಪ್ರಧಾನವಾಯಿತು. ಆದಾಯತೆರಿಗೆ, ಸಂಗೊಳ್ಳಿರಾಯಣ್ಣನ ಗಲ್ಲು, ಹಲಗಲಿ ಬೇಡರ ನಿಶ್ಯಸ್ತ್ರೀಕರಣ ಹೋರಾಟ, ಸಾಲಗಾರ ಸಂಗ್ಯಾನ ಶೋಷಣೆ ಈ ಮುಂತಾದ ಸಮಕಾಲೀನ ಸಂಗತಿಗಳು ಲಾವಣಿಗೆ ವಸ್ತುವಾದದ್ದೊಂದು ವಿಶೇಷ. ಲಾವಣಿಯೊಂದಿಗೆ ಲಾವಣಿ ರಚಕರ ಹೊಸ ಪರಂಪರೆ ನಮ್ಮಲ್ಲಿ ಹುಟ್ಟಿಕೊಂಡಿತು. ಲಾವಣಿ ಕವಿಗಳಿಗೆ ವಸ್ತಾದಿ ಎಂದು ಹೆಸರು. ಇವರನ್ನು ಗುರು ಸಮಾನ ಗೌರವದಿಂದ ಕಾಣಲಾಗುತ್ತದೆ. ಬಹಳಷ್ಟು ಲಾವಣಿ ರಚಕರಿಗೆ ಅದು ಹವ್ಯಾಸವಾಗಿತ್ತು. ಉಪಜೀವನಕ್ಕೆ ಬೇರೆ ಬೇರೆ ಉದ್ಯೋಗಗಳನ್ನು ಆಶ್ರಯಿಸಿಕೊಂಡು ಬಿಡುವಿನ ವೇಳೆಯಲ್ಲಿ ಲಾವಣಿ ಬರೆದು ಹಾಡುಗಾರರಿಗೆ ಕೊಡುತ್ತಿದ್ದರು. ಲಾವಣಿ ಅತ್ಯಂತ ಜನಪ್ರಿಯವಾಗಿದ್ದ ಕಾಲದಲ್ಲಿ ಕೆಲವರು ಲಾವಣಿ ರಚನೆಯಲ್ಲಿಯೇ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರು. ಅವರ ಹಾಡುಗಳನ್ನು ಹಾಡುತ್ತಿದ್ದ ಕಲಾವಿದರು ತಾವು ಪಡೆಯುತ್ತಿದ್ದ

ಸಂಭಾವನೆಯಲ್ಲಿ ಒಂದಿಷ್ಟು ಗುರು ಗೌರವದಿಂದ ಲಾವಣಿಕಾರರಿಗೆ ನೀಡುತ್ತಿದ್ದರು. ಲಾವಣಿಕಾರರಂತೆ ಲಾವಣಿ ಹಾಡುಗಾರರದೂ ಅರೆ ವೃತ್ತಿ ಕಲಾ ಜೀವನ. ಹಾಡುವ ಹುಚ್ಚು ಅವರನ್ನು ಸುಮ್ಮನಿರಗೊಡುತ್ತಿರಲಿಲ್ಲ. ಅವರಿಗೆ ಸಂಭಾವನೆಗಿಂತ ಹಾಡುವ ತೃಪ್ತಿ ಹೆಚ್ಚಿನದಾಗಿತ್ತು. ತಮ್ಮ ಉಪಜೀವನ ವೃತ್ತಿಯನ್ನು ಅವರೆಂದೂ ಕಡೆಗಣಿಸಿದವರಲ್ಲ. *

ಲಾವಣಿ ಗೀತಗೋಷ್ಠಿಯಲ್ಲಿ ಸ್ತ್ರೀ ಕಲಾವಿದೆಯರು ಪಾಲ್ಗೊಳ್ಳಲಾರಂಭಿಸಿದ್ದು ಒಂದು ಚಾರಿತ್ರಿಕ ಸಂಗತಿ. ಇದಕ್ಕೆ ಪ್ರೇರಣೆ ಮಹಾರಾಷ್ಟ್ರದಿಂದಲೇ ಬಂದಿತು. ಅಲ್ಲಿ ತಮಾಶಾ ಕಲಾವಿದೆಯರೆಲ್ಲ ಪರಿಶಿಷ್ಟ ಜಾತಿಯವರು. ಹಾಗೇ ಇಲ್ಲಿ ಲಾವಣಿ ಗೀಗೀ ಮೇಳಗಳ ಕಲಾವಿದೆಯರೂ ಪರಿಶಿಷ್ಟ ಜಾತಿಯವರು. ಮೇಲ್ವರ್ಗದ ಮೇಲು ಜಾತಿಯ ಮಹಿಳೆಯರು ಪ್ರದರ್ಶನಾತ್ಮಕ ಕಲೆಗಳಲ್ಲಿ ಪಾಲ್ಗೊಳ್ಳಲು ಸಮ್ಮತಿಸದ ಸಾಮಾಜಿಕ ವ್ಯವಸ್ಥೆಯಲ್ಲಿ ಈ ಪರಿಶಿಷ್ಟ ಜಾತಿಯ ಮಹಿಳೆಯರು ಮೈಚಳಿಬಿಟ್ಟು ಪಾಲ್ಗೊಂಡರು. ಅವರೆಲ್ಲ ದೇವದಾಸಿಯರಾಗಿದ್ದುದೇ ಇದಕ್ಕೆ ಕಾರಣ. ಇಂಥ ಕಲಾವಿದೆಯರು ನಂತರ ಡಪ್ಪಿನಾಟ ಶ್ರೀಕೃಷ್ಣ ಪಾರಿಜಾತ ಮೊದಲಾದ ಕಲಾಪ್ರಕಾರಗಳಿಗೂ ಪ್ರವೇಶಿಸಿದರು.

ಲಾವಣಿ ಸಂಪ್ರದಾಯ ಬೆಳೆದಂತೆಲ್ಲ ಅದರ ಪ್ರಭಾವ ಡಪ್ಪಿನಾಟ – ಸಣ್ಣಾಟಗಳ ಮೇಲೆ ಉಂಟಾದ್ದುದು ಒಂದು ವಿಶೇಷ. ಲಾವಣಿಯ ಸವಾಲ್ – ಜವಾಬ್ ತಂತ್ರವನ್ನಾಧರಿಸಿ ರಾಧಾನಾಟದ ಒಂದು ಆವೃತ್ತಿ ಹುಟ್ಟಿಕೊಂಡಿತು. ಬೀಬಿ ಇಂಗಳಗಿಯ ' ಅನುಭಾವಸಾರಲೀಲಾ' ಇಂಥ ವಿಶಿಷ್ಟ ರಂಗ ಪ್ರಯೋಗವಾಗಿದೆ. ' ಅಲ್ಲಮಪ್ರಭು' 'ನಿಜಗುಣ ಶಿವಯೋಗಿ' ಸಣ್ಣಾಟಗಳಲ್ಲಿ ಈ ಕಥಾನಾಯಕರು ಒಬ್ಬೊಬ್ಬ ಸ್ತ್ರೀಯೊಡನೆ ದೀರ್ಘವಾಗಿ ವಾದಿಸುವವರಾಗಿದ್ದಾರೆ.

ಉತ್ತರ ಕರ್ನಾಟಕದ ಸಾಮಾಜಿಕ ಸಂದರ್ಭದಲ್ಲಿ ಹಿಂದೂ ಮುಸ್ಲಿಂ ಬಾಂಧವ್ಯ ಗಮನಾರ್ಹವಾದುದು. ಮೊಹರಂ ಪದಗಳನ್ನು ರಚಿಸಿದ ಹಿಂದೂಗಳಿರುವಂತೆಯೇ ಲಾವಣಿ ಮತ್ತು ತತ್ವ ಪದಗಳನ್ನು ರಚಿಸಿರುವ ಮುಸ್ಲಿಂ ಕವಿಗಳಿದ್ದಾರೆ. ಈ ಕವಿಗಳು ಕನ್ನಡ ಭಾಷೆ ಮತ್ತು ವಿಷಯ ವಸ್ತುವಿನ ಮೇಲೆ ಗಳಿಸಿಕೊಂಡಿರುವ ಪ್ರೌಢಿಮೆ ಅಗಾಧವಾದುದು. ವೇದಾಂತ – ಪುರಾಣಗಳ ಬಗೆಗಿನ ನಿರರ್ಗಳ ನಿರೂಪಣೆ, ಸಮೃದ್ಧ ಪಾರಿಭಾಷಿಕ ಪದಗಳ ಬಳಕೆ ಅಚ್ಚರಿ ಮೂಡಿಸುವಂತಿವೆ.

ಮರಾಠಿ ಲಾವಣಿಕಾರರಂತೆ ಶೃಂಗಾರ ಗೀತೆಗಳನ್ನು ವಿಪುಲ ಪ್ರಮಾಣದಲ್ಲಿ ರಚಿಸಿದ ಕನ್ನಡ ಲಾವಣಿಕಾರರು ಇತರ ವಸ್ತುಗಳನ್ನು ಲಾವಣಿಗೆ ಅಳವಡಿಸಿಕೊಂಡಿರುವರು. ಮರಾಠಿಯವರು ಹೇಗೆ ತಮ್ಮ ಸ್ಥಳೀಯ ಸಂತರನ್ನು ಕುರಿತ ಲಾವಣಿ ಬರೆದರೋ ಕನ್ನಡದವರು ಕೂಡ ನಮ್ಮಲ್ಲಿಯ ಮಹಾಮಹಿಮರನ್ನು ಕುರಿತು ಲಾವಣಿ ಬರೆದರು. ಸಾಮಾಜಿಕ ಬದಲಾವಣೆಗೆ ಸ್ಪಂದಿಸಿದ್ದು ತೀರಾ ಕಡಿಮೆ. ಸಂಪ್ರದಾಯನಿಷ್ಠ ಲಾವಣಿಕಾರರು ಹೊಸ ಪರಿವರ್ತನೆಗಳನ್ನು ಶಿಷ್ಟಾಚಾರಗಳನ್ನು

---

* ಮಹಾರಾಷ್ಟ್ರದಲ್ಲಿ ಪರಶುರಾಮ ಎಂಬ ಪ್ರಸಿದ್ಧ ಲಾವಣಿಕಾರನಿದ್ದ. ಪರಶುರಾಮನ ವೃತ್ತಿ ಅರಿವೆ ಹೊಲಿಯುವದು. ಅವನು ಎಷ್ಟೇ ಪ್ರಸಿದ್ಧನಾಗಿದ್ದರೂ ತನ್ನ ವೃತ್ತಿಯನ್ನು ನಿರ್ಲಕ್ಷಿಸದೆ ನಿಷ್ಠೆಯಿಂದ ಮಾಡುತ್ತಿದ್ದ. ಒಮ್ಮೆ ಅವನ ಹಾಡುಕೇಳಿ ಮೆಚ್ಚಿಕೊಂಡ ಎರಡನೇ ಬಾಜೀರಾವ್ ಅವನಿಗೆ ದೊಡ್ಡ ಮೊತ್ತದ ಬಹುಮಾನ ನೀಡಲು ಹೋದ. ಪರಶುರಾಮನು "ನನ್ನ ಸೂಜಿ ದಾರ ಜೀವಂತ ಇರುವಂತೆ ಆಶೀರ್ವದಿಸಿರಿ ಸಾಕು" ಎಂದು ಹೇಳಿ ವಿನಯಪೂರ್ವಕವಾಗಿ ಬಹುಮಾನ ನಿರಾಕರಿಸಿದ.

ಗುಮಾನಿಯಿಂದಲೇ ನೋಡಿದರು. ವಿಡಂಬಿಸಿದರು. ಇಂಥದನ್ನು

ದಡೂತಿ ಸೀರಿ ದೊಡ್ಡ ಕುಂಕುಮ ಬಟ್ಟ
ಮುತ್ತೈದಿಗಿರತಿತ್ತು । ತು ತು ತು । ಆಗ ।
ಸೂಜಿಲಿ ಕುಂಕುಮ ಮೋಜಿಲಿ ಹಚ್ಚತಾರ
ಗಂಡಸಾಯಲೆಂತು । ತು ತು ತು । ಈಗ ।

ಈ ಮುಂತಾದ ರಚನೆಗಳಲ್ಲಿ ನೋಡಬಹುದಾಗಿದೆ. ನಮ್ಮ ಲಾವಣಿಕಾರರು ಪುರಾಣ ಕತೆಗಳನ್ನು ಧಾರಾಳವಾಗಿ ಬಳಸಿಕೊಂಡಿದ್ದಾರೆ. ಆ ಕಥೆಗಳನ್ನು ಪುನರ್ ಸೃಷ್ಟಿಸುವ – ವ್ಯಾಖ್ಯಾನಿಸುವ ಗೊಡವೆಗೆ ಅವರು ಹೋಗಿಲ್ಲ. ಕತೆಗಳನ್ನು ಇರುವಂತೆಯೇ ಹೇಳಿ ತಮ್ಮ ವಾದಗಳನ್ನು ಸಮರ್ಥಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಹೆಣ್ಣಿನ ಮಹಿಮೆಯನ್ನು ಸಾರಲು ಅನಸೂಯಾ. ಅರುಂಧತಿ. ಸಾವಿತ್ರಿಯರ ಕಥೆಗಳನ್ನು ಉದಾಹರಿಸಿದ್ದಾರೆ. ಗಂಡಸರ ದುಷ್ಟತನವನ್ನು ಬಿಂಬಿಸಲು ರಾವಣ. ಕೀಚಕ. ದುಶ್ಯಾಸನ ಮುಂತಾದವರ ದುಸ್ಸಾಹಸಗಳನ್ನು ವಿವರಿಸಿದ್ದಾರೆ. ಲಾವಣಿಕಾರರ ಪ್ರತಿಭೆಯ ಒಂದು ಮುಖ ಅವರು ಹೆಣೆದಿರುವ ಕಾಲ್ಪನಿಕ ಕಥೆಗಳಲ್ಲಿ ವ್ಯಕ್ತವಾಗಿದೆ. ತಮ್ಮ ಪಕ್ಷದ ಸಮರ್ಥನೆಗಾಗಿ ಇಂಥ ರಸವತ್ತಾದ ಪ್ರಸಂಗಗಳನ್ನು ಸೃಷ್ಟಿಸಿದ್ದಾರೆ. ಲಂಪಟಗಂಡನೊಬ್ಬ ಯಾವಾಗಲೂ ಹೆಂಡತಿಯ ಮುಂದೆ ತನ್ನ ಸೂಳೆಯನ್ನು ಹೊಗಳುತ್ತಿರುತ್ತಾನೆ. ಒಮ್ಮೆ ಆ ಜಾಣ ಹೆಂಡತಿ ಕತ್ತೆಯ ಉಚ್ಚೆಯನ್ನು ತಂದು ಅದು ಅವನ ಸೂಳೆಯ ಮನೆಯಿಂದ ತಂದ ಮಜ್ಜಿಗೆ ಸಾರು ಎಂದು ಹೇಳಿ ಗಂಡನಿಗೆ ನೀಡುತ್ತಾಳೆ. ಗಂಡ ಬಾಯಿ ಚಪ್ಪರಿಸಿಕೊಂಡು ಊಟ ಮಾಡಿದ. ಇನ್ನೊಂದು ಕಥೆಯಲ್ಲಿ ಮುಗ್ಧನಾದ ಮುಲ್ಲಾನೊಬ್ಬ ಹಾದರ ಮಾಡಲು ಹೋಗಿ ತನ್ನ ಗಡ್ಡ ಕಳೆದುಕೊಳ್ಳುತ್ತಾನೆ.

ಬಿಡಿ ಲಾವಣಿಗಳನ್ನು ಹಾಸ್ಯ ನೀತಿ ಉಪದೇಶಗಳಿಗಾಗಿ ಹಾಡಲಾಗುತ್ತಿದ್ದರೂ ಲಾವಣಿ ಗೋಷ್ಠಿಯ ಜೀವಾಳವೆಂದರೆ ಶಿವ – ಶಕ್ತಿಯರ ಪರವಾಗಿರುವ ವಾದ. ತತ್ವ – ಶಾಸ್ತ್ರ – ಕತೆ– ಲೌಕಿಕ ವಿಚಾರಗಳ ಮೂಲಕ ಆಯಾ ಪಕ್ಷದವರು ತಮ್ಮ ವಾದವನ್ನು ಸಮರ್ಥಿಸಿಕೊಳ್ಳುವರು. ಹಾಗೂ ಎದುರು ಪಕ್ಷದವರ ವಾದವನ್ನು ಖಂಡಿಸುವರು. ಈ ನಿರಂತರ ವಾಗ್ವಾದದಲ್ಲಿ ಕೆಲವು ಗೃಹೀತಗಳು ರೂಢಿಗೊಂಡಿರುತ್ತವೆ. ವಾಚ್ಯದ ಎಲ್ಲೆ ಮೀರಿ ರೂಪಕಗಳ ಮೂಲಕ ಗಂಡು ಹೆಣ್ಣುಗಳನ್ನು ಪರಿಚಯಿಸಲಾಗುತ್ತದೆ. ಗಂಡು – ಆತ್ಮ. ನಿರಾಕಾರ. ನೀರು. ಮಳೆ. ಬೆಳಕು. ಬೀಜ. ಗುಡಿಯಲ್ಲಿರುವ ದೇವರು. ಒರೆಯಲ್ಲಿರುವ ಖಡ್ಗ ಇತ್ಯಾದಿ. ಹೆಣ್ಣು – ದೇಹ. ಸಾಕಾರ. ಭೂಮಿ ಕತ್ತಲೆ. ದೇವರನ್ನೊಳಗೊಂಡ ದೇವಾಲಯ. ಖಡ್ಗವನ್ನೊಳಗೊಂಡಿರುವ ಒರೆ. ಇತ್ಯಾದಿ. ಈ ಸಂಕೇತಗಳನ್ನಾಧರಿಸಿ ವಾದವಿವಾದ ನಡೆಯುವುದು ಹೀಗೆ :

ಗಂಡಿನ ಪಕ್ಷದ ಪ್ರಸ್ತಾಪ –

ಆದಿಯಲ್ಲಿ ಇತ್ತು ನೀರೇ ನಿರಂಕಾರ
ಅದರಿಂದ ಆಯ್ತು ಭೂಮಿಯ ಅವತಾರ

ಹೆಣ್ಣಿನ ಪಕ್ಷದ ಆಕ್ಷೇಪ –

ನೀರೇ ನಿರಂಕಾರ ಇದ್ದರ ಅವನ್ನ
ಮೇಲಿನಿಂದ ಏನು ಎತ್ತಿ ಹಿಡಿದಿತ್ತು ?
ಕೆಳಗಿನಿಂದ ಯಾವುದು ಹೊತ್ತಿತ್ತು ?
ಶಕ್ತಿ ಇಲ್ಲದಿದ್ರ ನೀರು ಅತಂತ್ರವಾಗಿ ನಿಲ್ಲತಿತ್ತು ?

ಭೂಮಿ ಹೆಣ್ಣು ಮಳೆ ಗಂಡು. ಹೆಣ್ಣಿನ ಪಕ್ಷದವರು ಭೂಮಿಯೇ ಹೆಚ್ಚೆಂದು ವಾದಿಸಿದ ಮೇಲೆ ಗಂಡಿನ ಪಕ್ಷದವರ ಆಕ್ಷೇಪಣೆ –

ಭೂಮಿ ಹೆಚ್ಚ ಅಂದಮ್ಯಾಲ ಮಳಿ ಇಲ್ದ ಬೆಳಿಮಾಡ್ರಿ
ಅಂದರ ಖರೆ ಕಾಣಸ್ತೈತಿ ಕುಂತ ಜನಕ್ಕ
ಹಸ್ತ ಭೂಮಿ ಎರಿಬೀಡಿ ಸೆಳಮು ಕಿಸ್ತಯಾಕ ಕೊಡ್ರತೈತಿ ?
ಮುಚ್ಚಾವಯಾರಿಲ್ಲ ಮೇಘರಾಜ ಬರೋತನಕ ||

ಆರಂಭದಲ್ಲಿ ಹೀಗೆ ತರ್ಕಬದ್ಧವಾಗಿ ಕೇಳುಗರ ಕುತೂಹಲ ಕೆರಳಿಸುತ್ತಾ ಸಾಗುವ ಲಾವಣಿ ಗೋಷ್ಠಿ ಬರುಬರುತ್ತ ಗಾಂಭೀರ್ಯ ಕಳೆದುಕೊಂಡು ಪರಸ್ಪರ ನಿಂದನೆಯ ಮಟ್ಟಕ್ಕಿಳಿಯುತ್ತದೆ. ಬೈಗುಳಗಳ ವಿನಿಮಯದೊಂದಿಗೆ ಅಶ್ಲೀಲ ವಾತಾವರಣ ನಿರ್ಮಾಣವಾಗುತ್ತದೆ.

ಲಾವಣಿ ಒಂದು ಶಿಸ್ತಿಗೆ ಒಳಪಟ್ಟು ರಚನೆಗೊಂಡ ಗೀತಪ್ರಕಾರ. ಪಲ್ಲ ಚೌಕ ಚಾಲ ದುಡುಕಿ ಕೂಡಪಲ್ಲ ಅಗಮ ಇವು ಲಾವಣಿಯ ಅಂಗಗಳು. ಕಾಲ ಮತ್ತು ಪ್ರದೇಶಕ್ಕನುಗುಣವಾಗಿ ಇಳವು ಏರು ಖ್ಯಾಲಿ ಮುಂತಾದವುಗಳು ಗುರುತಿಸಲ್ಪಡುತ್ತವೆ. ಆರಂಭದ ಚಿಕ್ಕ ನುಡಿ ಪಲ್ಲ. ಇಡೀ ಹಾಡಿಗೆ ಪೀಠಿಕೆಯ ರೂಪದಲ್ಲಿರುವ ಈ ಪಲ್ಲ ಎರಡು, ನಾಲ್ಕು ಸಾಲಿನ ಭಾಗ. ನಂತರ ಚೌಕ. ಹಾಡಿನ ಮುಖ್ಯಭಾಗ. ಇದರಲ್ಲಿ ಮತ್ತೆ ನಾಲ್ಕಾರು ಒಳನುಡಿಗಳಿರುತ್ತವೆ. ಚಾಲ ಅಂದರೆ ದೃತ್ ಲಯದ ನಡಿಗೆ. ಎರಡನೆಯ ದೃತ್ ಚಲನೆಗೆ ದುಡುಕಿ ಎನ್ನುವರು. ಕೊನೆಯ ನುಡಿ ಕೂಡಪಲ್ಲ. ಇದಕ್ಕೆ ಏರ ಎಂದೂ ಹೆಸರು. ನುಡಿಗಳ ಘಟಕಕ್ಕೆ ಖ್ಯಾಲಿ ಎನ್ನುವುದೂ ಉಂಟು. ಅಗಮ ಹಾಡಿನ ಕೊನೆಯಲ್ಲಿರುವ ಕೂಡಪಲ್ಲ. ಇದರಲ್ಲಿ ಕವಿಯ ಊರು ಹೆಸರು ಗುರು ಇಷ್ಟ ದೈವಗಳ ಉಲ್ಲೇಖವಿರುತ್ತದೆ.

ಲಾವಣಿಗೋಷ್ಠಿ ಸ್ತುತಿಪದದಿಂದ ಆರಂಭವಾಗುವುದು. ಗಂಡಿನ ಪಕ್ಷದವರು ಶಿವ, ಗಣಪತಿಯರನ್ನು ಸ್ತುತಿಸಿದರೆ ಹೆಣ್ಣಿನ ಪಕ್ಷದವರು ಸರಸ್ವತಿ. ಪಾರ್ವತಿ. ಭೂಮಿ ತಾಯಿಯರನ್ನು ಸ್ತುತಿಸುವರು. ನಂತರ ಮೇಲೆ ವಿವರಿಸಿದ ಮುಖ್ಯ ಪದ. ಇದು ಮುಗಿದ ಮೇಲೆ ಸಕಿ. ಸಕಿ ಎಂಬುದು ಪಲ್ಲ ಚೌಕ ಕೂಡಪಲ್ಲಗಳ ವಿಂಗಡಣೆಯಿಲ್ಲದ ಏಕಪ್ರಕಾರವಾಗಿರುವ ಚಿಕ್ಕ ಹಾಡು. ಇದರ ಧಾಟಿ ಸರಳ. ನಡಿಗೆ ದೃತ್. ಸಾಮಾಜಿಕ ವಿಡಂಬನೆ. ನೀತಿ. ಧರ್ಮ. ಉಪದೇಶಕ್ಕೆ ಸಂಬಂಧಿಸಿದ ಸಕಿ ಮುಗಿಯಿತೆಂದರೆ ಆ ಹಾಡುಗಾರನ ಸರತಿ ಮುಗಿದಂತೆ. ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ಸಕಿ ಮತ್ತು ಖ್ಯಾಲಿ ಇವು ಫಾರಸಿ ಪದಗಳು. ಚಿಕ್ಕ ಬಿಡಿ ಸ್ತುತಿ ಪದಕ್ಕೆ ಸೂಫಿಗಳು ಸಕಿ ಎನ್ನುತ್ತಾರೆ. ಖ್ಯಾಲಿಯ ಮೂಲರೂಪ ಖಯಾಲ್. ಮನಸ್ಸನ್ನು ಪ್ರಸನ್ನಗೊಳಿಸುವ ಕಾಲ್ಪನಿಕ ರಚನೆ ಎಂದರ್ಥ. (ಹಿಂದೂಸ್ತಾನಿ ಸಂಗೀತದ ಖ್ಯಾಲ ಇದೇ )

ಲಾವಣಿ ಹಾಡುಗಾರಿಕೆಯಲ್ಲಿ ಒಂಟಿ ಲಾವಣಿ. ಮೇಳಲಾವಣಿ ಎಂದು ಎರಡು ವಿಧ. ಮೊದಲು ಒಂಟಿ ಲಾವಣಿ ರೂಢಿಯಲ್ಲಿತ್ತು. ಒಬ್ಬನೇ / ಒಬ್ಬಳೇ ಹಾಡುವುದು ಒಂಟಿ ಲಾವಣಿ. ಪುರುಷ ಹಾಡುಗಾರನು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಮಡಿ ಅಂಗಿ ತೊಟ್ಟು ಬಣ್ಣದ ಪೇಟಾ ಸುತ್ತಿಕೊಂಡು ಸೊಂಟಕ್ಕೆ ದಡಿ ಧೋತ್ರ ಬಿಗಿದುಕೊಂಡು ಜನರ ಮಧ್ಯದಲ್ಲಿ ನಿಂತು ಹಾಡುತ್ತಿದ್ದನು. ಹಾಡಿನ ಲಯಕ್ಕೆ ತಕ್ಕಂತೆ ಚಿಟಕೆ ಹಾಕುತ್ತ ಅತ್ತಿತ್ತ ತಿರುಗಾಡುತ್ತ ಹುರುಪಿನಿಂದ ಹಾಡುತ್ತಿದ್ದ. ಸ್ತ್ರೀ ಕಲಾವಿದೆ ಅಚ್ಚುಕಟ್ಟಾಗಿ ಸೀರೆ ಕುಪ್ಪಸ ತೊಟ್ಟು ಮಿತ ಆಭರಣಗಳಿಂದ ಅಲಂಕೃತಳಾಗಿ ಸೆರಗನ್ನು ಸೊಂಟಕ್ಕೆ ಬಿಗಿದು ಹಾಡುತ್ತಿದ್ದಳು. ಇದೇ ನಿಜವಾದ ಮೂಲ ಲಾವಣಿ ಮೇಳ. ನಂತರ ಬಂದ ಮೇಳ ಲಾವಣಿ ಗೀಗೀ ಮೇಳವೆನಿಸಿತು.

ಲಾವಣಿ ಗೀಗೀಯಾಗಿ ಪರಿವರ್ತನೆಗೊಂಡುದು ಒಂದು ಸಾಂಸ್ಕೃತಿಕ ಪ್ರಕ್ರಿಯೆಯಾಗಿದೆ. ಒಂಟಿ ಲಾವಣಿಯಲ್ಲಿ ವಾದ್ಯದ ಬಳಕೆಯಿರಲಿಲ್ಲ. (ಕೆಲವೆಡೆ ಡಪ್ಪು ಮಾತ್ರ ಬಾರಿಸುತ್ತಿದ್ದರು) ಒಬ್ಬನೇ ಹಾಡುಗಾರ ವೈವಿಧ್ಯತೆಯಿಲ್ಲದ ಧಾಟಿಗಳಲ್ಲಿ ವಾದ್ಯವಿಲ್ಲದೇ ಹಾಡುವುದು ಅಷ್ಟೊಂದು ಆಕರ್ಷಕವೆನಿಸಿರಲಿಲ್ಲ. ಹಾಡುಗಾರನ ವ್ಯಕ್ತಿತ್ವ ನಿರೂಪಣಾ ಶೈಲಿಗಳ ಜೋರಿನ ಮೇಲೆ ಈ ಒಂಟಿ ಲಾವಣಿ ಗೋಷ್ಠಿ ನಡೆಯುತ್ತಿತ್ತು. ಈ ಶೈಲಿಗೆ ವಾದ್ಯಗಳನ್ನು (ತುಂತುಣಿ ಡಪ್ಪು ತಾಳ) ಸೇರಿಸಿ ಹಿಮ್ಮೇಳದ ಕಲಾವಿದರ ನೆರವು ಪಡೆದು ಹಾಡಿದರೆ ಆಕರ್ಷಕವಾಗುತ್ತದೆಂಬ ವಿಚಾರ ಕೆಲವರಲ್ಲಿ ಹೊಳೆಯಿತು. ಇದು ಯಾರಿಗೆ ಹೊಳೆಯಿತು ? ಯಾರು ಕಾರ್ಯಗತಗೊಳಿಸಿದರು? ಎಂಬುದಕ್ಕೆ ಸ್ಪಷ್ಟ ಉತ್ತರವಿಲ್ಲ. ಈ ವಿಚಾರ ಯಾರಾದರೂ ಗೊಂದಲಿಗರಿಗೆ ಹೊಳೆದಿರಬೇಕು. ಹಿರಿಯರು ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತಾರೆ. ಗೊಂದಲಿಗರು ಕೂಡಾ ಬಿಡಿ ಹಾಡುಗಳನ್ನು ಕಥನ ಕವನಗಳನ್ನು ತಮ್ಮದೇ ಆದ ಶೈಲಿಯಲ್ಲಿ ಹಾಡುತ್ತಾರೆ. ಲಾವಣಿ ಹಾಡುಗಾರಿಕೆಗೆ ಮತ್ತು ಗೊಂದಲಿಗರ ಹಾಡುಗಾರಿಕೆಗೆ ಸಾಮ್ಯತೆಯಿದೆ. ಗೊಂದಲಿಗರು ಶ್ರುತಿಗಾಗಿ ಚೌಡಿಕಿ ಬಳಸುತ್ತಾರೆ. ನಾದಾಕ್ಷರ ನುಡಿಸುವ ಸಮಾಳ ಮತ್ತು ಲಯಗಾರಿಕೆ ನಿರ್ವಹಿಸುವ ತಾಳಗಳು ಕೂಡಿಕೊಂಡು ವಾದ್ಯಮೇಳ ನಿರ್ಮಾಣಗೊಂಡಿದೆ. ಹಿಮ್ಮೇಳದವರು ಹಾಡುವಾಗ ಸ್ವಲ್ಪ ಜೋರಾಗಿ ವಾದ್ಯಮೇಳ ನಾದೋತ್ಪತ್ತಿ ಮಾಡುವುದು. ಅದು ಹಾಡಿನ ಏಕತಾನತೆಯನ್ನು ನಿವಾರಿಸಿ ಕೇಳುಗರಿಗೆ ರಂಜನೆ ನೀಡುತ್ತದೆ. ಅಲ್ಲದೆ ಹಿಮ್ಮೇಳದವರು ನುಡಿಯ ಕೊನೆಯ ಭಾಗವನ್ನು ತಾವೂ ಪುನರಾವರ್ತನೆ ಮಾಡಿ ಕೊನೆಯಲ್ಲಿ ಜೀಯ ಜೀ ಎಂದು ಎಳೆದು ಸ್ವರ ಕೂಡಿಸುತ್ತಾರೆ. ಇದರಿಂದ ಮುಮ್ಮೇಳದವನಿಗೆ ವಿಶ್ರಾಂತಿ ದೊರೆಯುತ್ತದೆ. ಹೀಗೆ ವಾದ್ಯಗಳು ಮತ್ತು ಹಿಮ್ಮೇಳ ಗೊಂದಲಿಗರ ಮೇಳದ ಲವಲವಿಕೆಗೆ ಕಾರಣವಾಗಿವೆ. ಇದರ ಅನುಕರಣೆಯ ಫಲವಾಗಿ ಗೀಗೀ ಮೇಳ ಹುಟ್ಟಿಕೊಂಡದ್ದರಲ್ಲಿ ಆಶ್ಚರ್ಯವಿಲ್ಲ. ಗೊಂದಲಿಗರ ಮೇಳದಲ್ಲಿರುವ ತಾಳ ಮತ್ತು ಶ್ರುತಿಗಳು ಗೀಗೀ ಮೇಳದಲ್ಲಿವೆ. ಗೊಂದಲಿಗರು ಚೌಡಿಕೆಯೆನ್ನುವುದನ್ನು ಗೀಗೀಯವರು ಶ್ರುತಿ ಅಥವಾ ತುಂತುಣಿಯೆನ್ನುತ್ತಾರೆ. ಆಕಾರದಲ್ಲಿ ಸ್ವಲ್ಪ ವ್ಯತ್ಯಾಸವಿರುತ್ತದೆ. ಗೊಂದಲಿಗರಲ್ಲಿ ಸಮಾಳ ಮಾಡುವ ಕೆಲಸವನ್ನು ಗೀಗೀಯಲ್ಲಿ ಡಪ್ಪು ಮಾಡುತ್ತದೆ. ಗೊಂದಲಿಗರ ಮೇಳದಲ್ಲಿ ಮುಮ್ಮೇಳದವನು ಸಮಾಳ ಬಾರಿಸುವಂತೆ ಗೀಗೀ ಮೇಳದಲ್ಲಿ ಮುಖ್ಯ ಕಲಾವಿದನಾದ ಮುಮ್ಮೇಳದವನು ಡಪ್ಪು ಬಾರಿಸುವನು. ಸುಪ್ರಸಿದ್ಧ ಲಾವಣಿ ಕವಿ ಗೋಕಾಕದ ಕ್ಯಾಮಣ್ಣನು ಗೊಂದಲಿಗರ ಮೇಳದೊಂದಿಗೆ ನಿಕಟ ಸಂಬಂಧವನ್ನಿಟ್ಟುಕೊಂಡಿದ್ದದ್ದು. ಗೊಂದಲಿಗರಿಂದ ಪ್ರೇರಣೆ ಪಡೆದುಕೊಂಡು ಲಾವಣಿ ರಚಿಸಿದ್ದಾಗಿ ಹೇಳಲಾಗುತ್ತದೆ. ಹಾಗೇ ಅವನ ಲಾವಣಿಗಳನ್ನು ಗೊಂದಲಿಗರು ಹಾಡಿ ಪ್ರಚಾರಕ್ಕೆ ತಂದರು. ಆ ಗೊಂದಲಿಗರು ಕ್ಯಾಮಣ್ಣನ ಲಾವಣಿಗಳನ್ನು ಹೇಗೆ ಹಾಡುತ್ತಿರಬೇಕು? ಅವರು ಸುಸಜ್ಜಿತ ಮೇಳವಾಗಿರುವುದರಿಂದ ಒಂಟಿ ಲಾವಣಿಯ ಶೈಲಿಯಲ್ಲಿ ಹಾಡಿರಲಿಕ್ಕಿಲ್ಲ. ಹಿಮ್ಮೇಳ ಮತ್ತು ವಾದ್ಯಗಳನ್ನು ಬಳಸಿ ಹಾಡಿರಬೇಕು. ಅದು ಗೀಗೀ ಶೈಲಿ ರೂಪುಗೊಳ್ಳಲು ಕಾರಣವಾಗಿರಬೇಕು. ಲಾವಣಿ> ಗೀಗೀ ಪ್ರಕ್ರಿಯೆಯಲ್ಲಿ ಹಾಡುಗಾರಿಕೆಯ ವಿಧಾನ ಬದಲಾಯಿತು. ಸಾಹಿತ್ಯ ಬದಲಾಗಲಿಲ್ಲ. ಲಾವಣಿ ಹಾಡುಗಳನ್ನು ಸುಲಭವಾಗಿ ಗೀಗೀಗೆ ಅಳವಡಿಸಲಾಯಿತು. ಮೊದಲು ಲಾವಣಿ ಕಲಿತು ಹಾಡುತ್ತಿದ್ದು ನಂತರ ಆ ಹಾಡುಗಳನ್ನೇ ಗೀಗೀ ಶೈಲಿಯಲ್ಲಿ ಹಾಡಲಾರಂಭಿಸಿದ ಹಿರಿಯ ಕಲಾವಿದರು ಇನ್ನೂ ಇದ್ದಾರೆ. ಕಾಲ ಕಳೆದಂತೆ ಸ್ವತಂತ್ರ ಗೀಗೀ ರಚನೆಗಳು ಪ್ರಾರಂಭವಾದವು. ೧೯೩೦ ರಷ್ಟೊತ್ತಿಗೆ ಬಡಚಿ ಲಕ್ಷ್ಮೀಬಾಯಿ. ತುಂಗಳಸತ್ಯಪ್ಪ. ಪರಮಾನಂದವಾಡಿ ಮುಲ್ಲಾ. ಕುಡಚಿ ಮಲ್ಲಪ್ಪ ಮುಂತಾದವರ ಪ್ರಥಮ ಪಂತದ ಗೀಗೀ ಮೇಳಗಳು ಪ್ರಚಾರಕ್ಕೆ ಬಂದಿದ್ದವು. ಅಂದ ಮೇಲೆ ಲಾವಣಿ > ಗೀಗೀ ಪ್ರಕ್ರಿಯೆ ೧೯೧೫ ರ ಸುಮಾರಿಗೆ ಪ್ರಾರಂಭವಾಗಿರಬೇಕು. ಹಿಮ್ಮೇಳ ಮತ್ತು ವಾದ್ಯಗಳ ಬಳಕೆಯ ಈ ಹೊಸ

ಲಾವಣಿ ಗಾಯನಶೈಲಿ ( ಗೀಗೀ) ತೀವ್ರವಾಗಿ ಜನರನ್ನು ಆಕರ್ಷಿಸಿತು *

ಸ್ವಾತಂತ್ರ್ಯ ಚಳುವಳಿ ಜನಮುಖಿಯಾಗುತ್ತಿದ್ದ ಸಂದರ್ಭದಲ್ಲಿಯೇ ಲಾವಣಿ ಗೀಗೀ ಪ್ರಕ್ರಿಯೆ ನಡೆಯಿತು. ಅಲ್ಲಿಯವರೆಗೆ ಸ್ವಾತಂತ್ರ್ಯ ಚಳುವಳಿ ನಗರದ ವಿದ್ಯಾವಂತರಿಗೆ ಸೀಮಿತಗೊಂಡಿತ್ತು. ೧೯೨೦ ರ ನಂತರ ಗಾಂಧೀಜಿಯ ಪಾತ್ರ ವ್ಯಾಪಕವಾದಂತೆಲ್ಲ ಚಳವಳಿಯ ವ್ಯಾಪ್ತಿಯೂ ಹಿರಿದಾಯಿತು. ೧೯೩೦ ರ ದಾಂಡಿಯಾತ್ರೆ ಮತ್ತು ಉಪ್ಪಿನ ಸತ್ಯಾಗ್ರಹಗಳು ಸಾಮಾನ್ಯ ಭಾರತೀಯ ನಾಗರಿಕನಲ್ಲಿ ದೇಶಾಭಿಮಾನದ ಹುಮ್ಮಸ್ಸು ಮೂಡಿಸಿದವು. ಆ ಹುಮ್ಮಸ್ಸು ಬೆಳೆಯುತ್ತಲೇ ಹೋಗಿ ೪೨ ರ ಚಲೇಜಾವ್ ಚಳವಳಿಯ ಕಾಲಕ್ಕೆ ಶಿಖರಕ್ಕೇರಿತು. ಅದು ನಿಜವಾಗಿಯೂ ಭಾರತೀಯರ ಹೋರಾಟ. ಏಕೆಂದರೆ ಅದರಲ್ಲಿ ಪಾಲ್ಗೊಂಡ ಬಹು ಸಂಖ್ಯಾತರು ಗ್ರಾಮೀಣ ಪ್ರದೇಶದ ಮುಗ್ಧ ನಾಗರಿಕರು. ೪೨ ರ ಚಳುವಳಿಯ ಪ್ರವಾಹಕ್ಕೆ ಜನಸಾಗರ ಧುಮುಕಲು ಹಲವಾರು ಕಾರಣಗಳುಂಟು. ಅವುಗಳಲ್ಲಿ ಅಂದಿನ ಲಾವಣಿ – ಗೀಗೀ ಸಾಹಿತ್ಯದ ಪಾತ್ರ ಗಮನಾರ್ಹವಾದುದು.

ಮರಾಠಿ ಲಾವಣಿಕಾರರಲ್ಲಿ ಕೆಲವರು ೧೯೦೦ ರಷ್ಟೊತ್ತಿಗೆ ರಾಷ್ಟ್ರೀಯ ಭಾವನೆ ರೂಢಿಸಿಕೊಂಡಿದ್ದರು. ಕನ್ನಡ ಲಾವಣಿಕಾರರು ಇತ್ತ ಗಮನ ಹರಿಸಲಿಲ್ಲ. ಶೃಂಗಾರ ಲಾವಣಿಗಳ ಗುಂಗಿನಲ್ಲಿಯೇ ಕಾಲಕಳೆದರು. ಒಂದು ರೀತಿಯಲ್ಲಿ ಸಮಕಾಲೀನ ಸಂಗತಿಗಳಿಗೆ ಸ್ಪಂದಿಸದ ಸಂಪ್ರದಾಯವಾದಿಗಳಾದರು. ಇಂಥ ಜಡ ಸಂಪ್ರದಾಯವಾದಿಗಳ ಮಧ್ಯದಲ್ಲಿ ಬೆಳಗಾಂವಿ ಜಿಲ್ಲೆಯ ಹುಲಕುಂದ ಗ್ರಾಮದಲ್ಲಿ ರಾಷ್ಟ್ರೀಯವಾದಿ ಲಾವಣಿಕಾರರ ಗುಂಪು ತಲೆ ಎತ್ತಿತು. ಭೀಮಕವಿ ಎಂಬ ಕಾವ್ಯನಾಮದ ಬಸಪ್ಪ ಸಂಗಪ್ಪ ಬೆಟಗೇರಿಯವರು ಈ ಗುಂಪಿನ ಪ್ರಮುಖ ಕವಿ. ಇವರು ಇತ್ತಗಮನ ಹರಿಸಲು ಪ್ರೇರಣೆ ಏನು ? ಇವರ ಮೊದಲ ಪ್ರಕಟಣೆ ( ಬಹುಶಃ ೧೯೩೦) " ರಾಷ್ಟ್ರೀಯ ಗೀಗೀ ಪದಗಳು " ಎಂಬ ಹೆಸರಿನಿಂದ ಪ್ರಕಟವಾಯಿತು. ೨೫ ಪುಟಗಳ ಈ ಪುಟ್ಟ ಪುಸ್ತಿಕೆ ಚಾರಿತ್ರಿಕವಾದ ಮಹತ್ವ ಪಡೆದಿದೆ. ಇದರ ಆರಂಭದಲ್ಲಿ ಹ. ಬ. ಮಿರ್ಜಿಯವರು ಹೀಗೆ ಹೇಳಿದ್ದಾರೆ– "ಅಖಿಲ ಕರ್ನಾಟಕದಲ್ಲಿ ಮೊದಲಿನಿಂದಲೂ ರೂಢಿಯೊಳಗಿದ್ದ ಗೀಗೀ ಪದಗಳು ಕಾಲಮಾನ ಪರಿಸ್ಥಿತಿಗೆ ಅನುಸರಿಸಿ ಅಧ್ಯಾತ್ಮಿಕ. ಸಾಮಾಜಿಕ. ಧಾರ್ಮಿಕ. ನೈತಿಕ ವಿಷಯಗಳ ಪ್ರಚಾರ ಮಾಡುತ್ತ ಬಂದ ಸಂಗತಿಯು ತಮ್ಮೆಲ್ಲರಿಗೆ ಗೊತ್ತಿರಲಿಕ್ಕೆ ಸಾಕು. ಆದರೆ ಇತ್ತೀಚೆಗೆ ದೇಶವು ಪಾರತಂತ್ರದಲ್ಲಿ ಸಿಲುಕಿ ಜನತೆಯು ಅಜ್ಞಾನಾಂಧಕಾರದಲ್ಲಿ ಮುಳುಗಿ ಕೇವಲ ಸ್ವಾರ್ಥಲೋಲುಪರಾಗಿ ಪಾರಮಾರ್ಥಿಕ ವಿಷಯವನ್ನು ಮರೆತು ವಿಷಯಾಸಕ್ತರಾಗಿ ಶೃಂಗಾರ ಪದಗಳಿಗೆ ಮೋಹಿತರಾದ್ದರಿಂದ ಪದಗಳನ್ನು ಮಾಡುವವರೂ ಹಾಡುವವರೂ ಬೀಭತ್ಸ ಶಬ್ದಗಳಿಂದ ಕೂಡಿದ ಶೃಂಗಾರ ಪದಗಳನ್ನು (ಪರದೇಸಿ ನಾಗೇಶಿ ಅಥವಾ ಕಲಿಗಿ ತುರಾಯಿಯೆಂಬ) ಪದಗಳನ್ನು ಹಾಡತೊಡಗಿದರು.ಹಳ್ಳಿಯ ಜನರಂತೂ ತಮ್ಮ ವಿರಾಮ ಕಾಲವನ್ನು ಇಂಥ ಪದಗಳನ್ನು ಕೇಳುವುದರಲ್ಲಿಯೇ ಕಳೆದರಲ್ಲದೆ ಬೇರೊಂದು ವಿಷಯವನ್ನು

---

* ಬೆಳಗಾಂವಿ ಜಿಲ್ಲೆ ಮುಗಟಖಾನ ಹುಬ್ಬಳ್ಳಿಯ ಸಮೀಪದ ಮಲಪ್ರಭಾ ನದಿಯ ದಂಡೆಯ ಮೇಲೆ ಸಂಕ್ರಮಣಕ್ಕೆ ಬಹಳ ದೊಡ್ಡ ಜಾತ್ರೆ ಸೇರುತ್ತಿತ್ತು. ೧೯೩೨ ರ ಸಂದರ್ಭ. ಹಾಲಗಿ ಗ್ರಾಮದವರು ಕುಡಚಿಯ ಮಲ್ಲಪ್ಪನ ಗೀಗಿ ಮೇಳ ಕರೆದುಕೊಂಡು ಬಂದಿದ್ದರು. ಮಧ್ಯಾಹ್ನ ಗೀಗೀ ಗೋಷ್ಠಿ ಪ್ರಾರಂಭವಾಯಿತು. ಜನರಿಗೆ ಅದು ಅಚ್ಚರಿಯ ಸಂಗತಿ. ಹೊಸ ಅನುಭವ. ಕಿಕ್ಕಿರಿದು ಸೇರಿ ಹಾಡು ಕೇಳಲಾರಂಭಿಸಿದರು. ಅಂದು ಥೇಟರ್‌ದಲ್ಲಿ ಕುಸ್ತಿಗಳಿದ್ದವು. ಕುಸ್ತಿ ಥೇಟರ್ ಕಡೆಗೆ ಯಾರೂ ಹೋಗದೆ ಗೀಗೀ ಕೇಳುತ್ತಾ ನಿಂತರು. ಆಗ ಥೇಟರ್ ಮಾಲಿಕ ಬಂದು ಮಲ್ಲಪ್ಪನಿಗೆ ಕೈ ಮುಗಿದು ಹಾಡು ನಿಲ್ಲಿಸಲು ವಿನಂತಿಸಿಕೊಂಡ ನಂತರ ಜನರು ಕುಸ್ತಿ ಥೇಟರ್ ಕಡೆಗೆ ಚಲಿಸಿದರು. ಗೀಗೀ ಅಷ್ಟು ಆಕರ್ಷಕವೆನಿಸಿತ್ತು.

ತಿಳಿದುಕೊಳ್ಳದಷ್ಟು ಅಸಮರ್ಥರಾದರು.

ಇತ್ತ ಯುಗನಾಯಕರಾದ ಮಹಾತ್ಮಾ ಗಾಂಧಿಯವರು ಅಜ್ಞಾನದಲ್ಲಿ ಮುಳುಗಿದ ಜನತೆಗೆ ಜ್ಞಾನೋದಯವಾಗುವಂತೆಯೂ ಮುಂಬರುವ ಸಂಗ್ರಾಮದಲ್ಲಿ ಹೆಗಲಿಗೆ ಹೆಗಲು ಹಚ್ಚಿ ಕಾದುವಂತೆಯೂ ಹುರಿದುಂಬಿಸುವುದರ ಸಲುವಾಗಿ ತಮ್ಮ ಅಮೃತವಾಣಿಯಿಂದ ಸ್ವಾತಂತ್ರ್ಯ ಮಂತ್ರವನ್ನು ಉಚ್ಚರಿಸತೊಡಗಿದರು. ಮೊದಲೇ ಅಜ್ಞಾನಿಗಳಾದ ಹಳ್ಳಿಗರ ಬುದ್ಧಿಗೆ ಮಹಾತ್ಮರ ಉಪದೇಶವು ತಿಳಿಯದಂತಾಯಿತು. ಇಂಥ ಸಂಧಿಕಾಲದಲ್ಲಿ ಬೆಳಗಾಂ ಜಿಲ್ಲೆಯ ಕಾಂಗ್ರೆಸ್ ಮುಖಂಡರಾದ ಶ್ರೀ ವೆಂಕರಡ್ಡಿ ಹೂಲಿಯವರೂ ದಿ. ವಾಮನರಾವ್ ಬಿದರಿಯವರೂ ಹೇಗೆ ಮಾಡಿ ಹಳ್ಳಿಯ ಜನರಿಗೆ ಗಾಂಧಿ ತತ್ವಗಳನ್ನು ತಿಳಿಸಿಕೊಡಬೇಕೆಂಬುದನ್ನು ವಿಚಾರ ಮಾಡತೊಡಗಿದರು. ನಂತರ ಶ್ರೀ ವೆಂಕರಡ್ಡಿ ಹೂಲಿಯವರಿಗೆ ಗೀಗೀ ಪದಗಳಿಂದ ತಿಳಿಸಿದರೆ ತಿಳಿಯಬಹುದೆಂದು ಭರವಸೆಯಾಯಿತು. ೧೯೩೦ ನೇ ಇಸ್ವಿಯ ಜಾನೇವಾರಿ ೨೬ ನೇ ತಾರೀಖಿಗೆ ಹುಲಕುಂದಕ್ಕೆ ಬಂದು ನಮ್ಮೆಲ್ಲರಿಗೆ ಗಾಂಧೀಜಿ ವಿಚಾರಗಳನ್ನು ತಿಳಿಸಿ ವಿಧಾಯಕ ಕಾರ್ಯಕ್ರಮಗಳ ಪ್ರಚಾರ ಮಾಡುವಂತೆ ಹುರುಮಂಬಿಸಿದರು. ಇವರ ಪರಿಣಾಮವಾಗಿ ಹುಲಕುಂದದ ಬಸಪ್ಪ ಸಂಗಪ್ಪ ಬೆಟಗೇರಿ. ಹಣಮಪ್ಪ ಬಸಪ್ಪ ಮಿರ್ಜಿ. ಹುಲಕುಂದ ಪಟ್ಟದ್ದೇವರು ( ಶಿವಲಿಂಗ ಕವಿ). ಸಿದ್ಧರಾಯ. ಗಿರಿಮಲ್ಲ. ಸಂಗಯ್ಯ ಮುಂತಾದವರು ರಾಷ್ಟ್ರೀಯ ಪದಗಳನ್ನು ರಚಿಸಿದರು. ಅದೇ ಗ್ರಾಮದ ಗೀಗೀ ಮೇಳ ತಯಾರಾಯಿತು. ' ಆರಭಾವ ಹಿಂದ ಗೀಗೀ ಮೇಳ' ಎಂಬ ಹೆಸರಿನ ಈ ಮೇಳವು ರಾಷ್ಟ್ರೀಯ ವಿಚಾರಗಳ ಪ್ರಚಾರಕ್ಕೆ ಕಂಕಣ ಬದ್ಧವಾಯಿತು. ಬೆಳಗಾಂವಿ. ಧಾರವಾಡ. ವಿಜಾಪುರ. ಬಳ್ಳಾರಿ. ಕಾರವಾರ. ಸೊಲ್ಲಾಪುರ ಜಿಲ್ಲೆಗಳಲ್ಲಿ ಸಂಚರಿಸಿತು". ಮೇಳದ ಕಲಾವಿದರು ಖಾದಿಧಾರಿಗಳಾಗಿದ್ದರು. ತುಂತುಣಿಯ ಕೋಲಿನ ತುದಿಗೆ ಚಿಕ್ಕ ಕಾಂಗ್ರೆಸ್ ಧ್ವಜ ಸಿಕ್ಕಿಸಿರುತ್ತಿದ್ದರು. (ನಂತರ ಇದರ ಸ್ಥಾನವನ್ನು ರಾಷ್ಟ್ರೀಯ ಧ್ವಜ ಪಡೆದುಕೊಂಡಿತು) ಹುಲಕುಂದ ಮೇಳದ ಪ್ರಭಾವ ಅಲ್ಲಲ್ಲಿ ಗೋಚರಿಸಿತು. ಇಂಥ ಸ್ವತಂತ್ರ ಮೇಳಗಳು ಬಹಳಷ್ಟು ಹುಟ್ಟದಿದ್ದರೂ ರಾಷ್ಟ್ರೀಯ ಪದಗಳನ್ನು ಹಾಡುವ ಪ್ರವೃತ್ತಿ ಬೆಳೆಯಿತು. ಕಲ್ಗಿ ತುರಾ ಮೇಳದವರು ನಡು ನಡುವೆ ಇಂಥ ಪದಗಳನ್ನು ಹಾಡತೊಡಗಿದರು. ಹುಲಕುಂದ ರಾಷ್ಟ್ರೀಯ ಗೀಗಿ ರಚನೆಗಳು ಇತರ ಲಾವಣಿಕಾರರಿಗೆ ಪ್ರೇರಣೆ ನೀಡಿದವು. ಹಿರಿಯ ಲಾವಣಿ ಕವಿ ಗೋಕಾಕದ ಕ್ಯಾಮಣ್ಣನು ತನ್ನ ೭೪ ನೇ ವಯಸ್ಸಿನಲ್ಲಿ (೧೯೩೮ ರಲ್ಲಿ) ರಾಷ್ಟ್ರೀಯ ವಿಚಾರದ ಕೆಲವು ಹಾಡುಗಳನ್ನು ಬರೆದನು.

ಧ್ವಜ ವಂದನಕೆ ನೀವು ನಡೆಯಿರಿ
ಸ್ವರಾಜ್ಯ ಸೌಖ್ಯವ ಪಡೆಯಿರಿ
ಇನ್ನು ಮುಂದೆ ಹೆಜ್ಜೆಯನಿಡಿರಿ
ಜಯವೆಂದು ಗರ್ಜನೆ ಹೊಡಿರಿ.

ಇದು ಅವನ ರಚನೆಯ ಒಂದು ತುಂಡು. ಕ್ಯಾಮಣ್ಣನು ತನ್ನ ತರುಣ ಬಂಧು ಬಾಳಪ್ಪನೆಂಬವನು ಚಳವಳಿಯಲ್ಲಿ ಭಾಗವಹಿಸಿ ಜೇಲು ಶಿಕ್ಷೆಯನುಭವಿಸಿದರ ಬಗ್ಗೆ ಹಾಡು ಬರೆದಿದ್ದಾನೆ.

ಸದ್ಯದ ಪರಿಸ್ಥಿತಿಗೆ ವಿಮುಖರಾಗಿ ಅಧ್ಯಾತ್ಮದ ಒಣ ಚರ್ಚೆಯಲ್ಲಿ ಹೊತ್ತುಗಳೆಯುವ ಸಂಪ್ರದಾಯವಾದಿಗಳ ಮನೋಭಾವವನ್ನು ಟೀಕಿಸುತ್ತ

ನಿರಾಕಾರ ಆಕಾರ ಹೇಳೂದಲ್ಲ
ಹಂಕಾರ ಏಟು ತರವಲ್ಲ
ಜಯಕಾರ ಹಾಕಿರಿ ಮೊದಲ
ಭಾರತಾಂಬೆ ಆಗುವಳು ಖುಷಿಯಾಲ ||

ಎಂದು ಹೇಳಿರುವುದರಲ್ಲಿ ಸಧ್ಯದ ಪರಿಸ್ಥಿತಿಗೆ ಸ್ಪಂದಿಸಬೇಕೆನ್ನುವ ತುರ್ತು ಎದ್ದು ಕಾಣುತ್ತದೆ. ಜೀವನದ ಪರಮಗುರಿ ಆತ್ಮಜ್ಞಾನ. ಅದನ್ನು ಪಡೆದವನಿಗೆ ಲೌಕಿಕ ಜೀವನ ತ್ಯಾಜ್ಯ. ಆದರೆ ಸತ್ಯಾಗ್ರಹ ಅದಕ್ಕಿಂತಲೂ ಹೆಚ್ಚಿನದೆಂಬುದನ್ನು

ಆತ್ಮಜ್ಞಾನದ ತತ್ವ ತಿಳಿದ ಮೇಲೆ
ಸತ್ಯಾಗ್ರಹದ ಬೆನ್ನ ಹತ್ತಬೇಕರಿ
ಹತ್ತದವ ಒಬ್ಬ ಕತ್ತಿ ಸರಿ || ( ಭೀಮಕವಿ)

ಹೀಗೆ ಕಟುವಾಗಿ ತಿಳಿಸಲಾಗಿದೆ. ಇಡಿಯಾಗಿ ರಾಷ್ಟ್ರೀಯ ವಿಚಾರಗಳಿಗೆ ಸಂಬಂಧಿಸಿದ ಸ್ವತಂತ್ರ ಹಾಡುಗಳು ವಿಪುಲವಾಗಿ ಹುಟ್ಟಿಕೊಂಡವು. ಹಾಗೆ ತಮ್ಮನ್ನು ಸಂಪೂರ್ಣವಾಗಿ ರಾಷ್ಟ್ರೀಯ ಮೇಳಕ್ಕೆ ಅರ್ಪಿಸಿಕೊಳ್ಳಲಾರದ ಆದರೆ ದೇಶಾಭಿಮಾನಿಗಳಾದ ಹಾಡುಗಾರರಿದ್ದರು. ಅಂಥವರು ಸಂದರ್ಭ ಬಂದಲ್ಲಿ ನಡುನಡುವೆ ರಾಷ್ಟ್ರೀಯ ವಿಚಾರಗಳನ್ನು ಪ್ರಸ್ತಾಪಿಸುತ್ತಿದ್ದರು. ಅವರಿಗರಿವಿಲ್ಲದಂತೆ ರಾಷ್ಟ್ರೀಯ ಭಾವನೆ ಅವರನ್ನು ಆಕ್ರಮಿಸಿಕೊಂಡಿತ್ತು.

ಮೋಟರ ಬಂದು ಹಿಂದಕ ಬಿದ್ದವು ಜಟಗಾ
ಚಳವಳಿ ಹೆಚ್ಚಾಗಿ ಟೊಪ್ಪಿಗಿ ಬಂದು
ಮೂಲಿಗಿ ಬಿದ್ದವು ಪಟಗಾ ||

ಇಂಥ ರಚನೆಗಳು ಇದಕ್ಕೆ ಉದಾಹರಣೆಯಾಗಿವೆ.

ಗೀಗೀ ಗೋಷ್ಠಿಯಲ್ಲಿ ಆರಂಭದ ಸ್ತುತಿಗೆ ವಿಶಿಷ್ಟ ಗೌರವವಿದೆ. ತಮ್ಮ ತಮ್ಮ ಪಕ್ಷದ ದೈವವನ್ನು ಕುರಿತು ( ಶಿವ – ಶಕ್ತಿ) ಹಾಡುವುದು ಸಾಮಾನ್ಯ. ರಾಷ್ಟ್ರೀಯ ಗೀಗೀ ಕವಿಗಳು ಸ್ತುತಿಯನ್ನು

ಭಾರತಾಂಬೆಗೆ ಶಾರದಾ ತಾಯಿಗೆ ಪೂರ ಶಿರಸಾಷ್ಟಾಂಗ ನಮಸ್ಕಾರಾ
ಬರಿಯಲಿಕ್ಕೆ ಕಲಿಸಿದ ಗುರುವರ್ಯರಿಗೆ ಶಿರಬಾಗಿ ಮಾಡುವೆ ನಮಸ್ಕಾರ ( ಭೀಮಕವಿ) .

ಹೀಗೆ ಬದಲಾಯಿಸಿಕೊಂಡು ಭಾರತಾಂಬೆ ಎಂಬ ದೈವದ ಶ್ರೇಷ್ಠತೆ ಸ್ಥಾಪಿಸಿದರು. ಅಂಥ ಭಾರತಾಂಬೆಯ ಪುತ್ರನ ತಳಮಳವನ್ನು

ಸ್ತುತಿಗೈವೆ ಭೂಮಿತಾಯಿ ಮತಿನೀಯೆ ಜಗನ್ಮಾಯಿ
ಅತಿ ವ್ಯಥೆಯಾದ ಸುತನಾ |
ಭಾರತಮಾತೆ ಗತಿಯ ಹಚ್ಚಬೇಕ ನೀನಾ || ( ಭೀಮಕವಿ)

ಹೀಗೆ ಭೂಮಿತಾಯಿಯಲ್ಲಿ ಬಿನ್ನವಿಸಿಕೊಳ್ಳಲಾಗಿದೆ.

ಜನತೆಯಲ್ಲಿ ದೇಶಾಭಿಮಾನ ಉಂಟಾಗಬೇಕಾದರೆ ಅವರಿಗೆ ಸಧ್ಯದ ರಾಜಕೀಯ ಸ್ಥಿತಿಯನ್ನು ಬ್ರಿಟಿಷರ ದಬ್ಬಾಳಿಕೆ – ಶೋಷಣೆಗಳನ್ನು ಪರಿಣಾಮಕಾರಿಯಾಗಿ ತಿಳಿಸಬೇಕಲ್ಲವೇ ? ಈ ಬಡದೇಶದ ದೊಡ್ಡ ಅಧಿಕಾರಿಗಳಾಗಿರುವ ಬ್ರಿಟಿಷರ ಶೋಷಣೆ ಹೀಗಿದೆ –

ಕೆಲಸಕ್ಕೆ ಅವರು ನೇಮಣೂಕಿ ಆದಮ್ಯಾಲ
ಪಗಾರ ಅಲ್ಲದೆ ಬ್ಯಾರೆ ಸುಲಿಯುವರಾ
ಇಂಗ್ಲಂಡದಿಂದ ಹಿಂದುಸ್ತಾನಕ ಬರುವುದಕ
ಹಾದಿ ಖರ್ಚ ಮೂವತ್ತ ಸಾವಿರಾ ||

ಇಂಗ್ಲಂಡದೊಳಗ ಅವರ ಹೆಂಡರ ಹಡದರ
ಬಾಣೆತನಕ ಕೊಡಬೇಕ ನೀವೆಲ್ಲರಾ
ಒಂದು ಲಕ್ಷ ಎಂಟು ಸಾವಿರ ಮೋಟೋರಕ್ಕ ಕೊಡಬೇಕ
ಅದರಾಗ ಕೂತಗೊಂಡ ಮೆರಿಯುವರಾ ॥ (ಭೀಮಕವಿ)

ಸದ್ಯದ ದುಸ್ಥಿತಿಯ ಅರಿವು ಉಂಟಾಗಬೇಕಾದರೆ ಹಿಂದಿನ ವೈಭವದ ನೆನಪು ಇರಬೇಕಲ್ಲವೇ? ಇಡೀ ಜಗತ್ತಿನಲ್ಲಿ ಹೆಮ್ಮೆಯಿಂದ ಮೆರೆಯುತ್ತಿದ್ದ ನಮ್ಮ ದೇಶಕ್ಕೆ ಇಂಥ ಹೀನ ಸ್ಥಿತಿ ಬರಲು ಕಾರಣವೇನು ? ಇದನ್ನೆಲ್ಲ ಮನಸ್ಸಿಗೆ ಮುಟ್ಟುವಂತೆ ನಿರೂಪಿಸುವ ಕಿತ್ತೂರಿನ ಬಸವಾರ್ಯ ಕಂಬಿ ಅವರ ಜನಪ್ರಿಯ ಲಾವಣಿ ಹೀಗಿದೆ :

ಧರಣಿಯೊಳು ಭರತಖಂಡದ ಸಿರಿಗೆ ಸರಿಗಾಣೆನೆಂದು
ಮರಮರಮರುಗುತ ಪರನಾಡುಗಳು
ವನಚರರಂತೆ ತಿರುಗುತ ಗುಡ್ಡಗಾಡಿನೊಳು
ಪರಿಪರಿ ಕಷ್ಟಹೊಂದಿದವು ಪೂರ್ವ ಕಾಲದೊಳು |
ಸಿರಿಯು ಹರಿದುಹೋಗಿ ಈಗ ತಿರಿದು ತಿಂದರಿನ್ನು ಕಣ್
ತೆರೆದು ನೋಡವಲ್ಲರಿ ಹಿಂದುಗಳು
ಎಂಥ ಮರುಳ ಮಂದಿ ಹುಟ್ಯಾರ ನಮ್ಮ ನಾಡಿನೊಳು ॥

ಬೆಳ್ಳಿ ಬಂಗಾರ ಹೊಗೆಯು ಬಹಳ ನೆಳ್ಳ ಗವಿಸಿ ದೇಶವೆಲ್ಲ
ಪೊಳ್ಳ ಬಿಡದೆ ತುಂಬಿತ್ತು ಗಗನದೊಳು
ವಿದ್ಯೆಯ ಕೊಳ್ಳಿ ಮಿಂಚತಿತ್ತು ಹಿಮಾದ್ರಿಯೊಳು
ಕಂಡು ಸಳ್ ಹೊಡದ ಹೋಗತಿದ್ರು ವೈರಿಗಳು |
ಸುಳ್ಳ ಮಾತ ಅಲ್ಲ ಕೀರ್ತಿಬಳ್ಳಿ ಹಬ್ಬಿಕೊಂಡು ವೀರ
ಡೊಳ್ಳು ಹೊಡೆಯುತ್ತಿತ್ತು ದಿಗ್ ದೇಶದೊಳು ॥

ಬೆಳೆದ ರಾಜ್ಯವೆಲ್ಲ ಅಳಿದುಹೋದರಿನ್ನು
ತಿಳಿವಲ್ತು ಜನರಿಗಿ |
ಹೇಳಿದರ ಕಾಣಸ್ತೈತಿ ನಗಿ ॥

ಹೊಳಿಯ ನೀರ ಪರಿ ಹರಿದು ಹೋಗತ್ತೈತಿ
ಉಳಿಯವಲ್ತು ಒಂದ ಮಗಿ
ನೋಡಿ ಆಗತ್ತೈತಿ ತಗಬಗಿ ॥

ಹೋತು ಹರವಿ ಒಡದು ಹಂಚಾಗಿ
ಅಭಿಮಾನವಿಲ್ಲ ಜನರಿಗಿ
ಸುಡಲಿವರ ಜನ್ಮ ತಗಿತಗಿ ॥

ಬ್ರಿಟಿಷರ ದಬ್ಬಾಳಿಕೆಯನ್ನು ಅನಿವಾರ್ಯವಾಗಿ ಸಹಿಸಿಕೊಂಡು ಮೌನವಾಗಿರಬೇಕಾಗಿದ್ದ ಸ್ಥಿತಿ ಅಂದಿತ್ತು. ಅಧಿಕಾರಶಾಹಿಯ ಕ್ರೌರ್ಯಗಳನ್ನು ಪ್ರತಿಭಟಿಸುವ ಚೈತನ್ಯ ಅಂದಿನ ಭಾರತೀಯರಿಗಿದ್ದಿಲ್ಲ. ಆದರೆ ಅವರ ತಳಮಳ ಆವಿಯಾಗಿ ಹೋಗದೆ ವಿಡಂಬನೆಯ ಕಿಡಿಗಳಾಗಿ ಸಿಡಿದವು. ನೇರವಾಗಿ ತಮ್ಮ ಆಕ್ರೋಶವನ್ನು ತೋರಿಸಿಕೊಳ್ಳಲು ಅಸಹಾಯಕರಾಗಿದ್ದ ಜನತೆ ಸೂಚ್ಯವಾಗಿ ಅಸಮಾಧಾನವನ್ನು ತೋರ್ಪಡಿಸಿದೆ. ಬ್ರಿಟಿಷರನ್ನು ಕೆಂಪು ಮುಖದ ಕೋತಿಯನ್ನಾಗಿ ಸಂಕೇತಿಸಿ ವಿಡಂಬಿಸಿದ ಒಂದು ಪುಟ್ಟ ಲಾವಣಿ ಹೀಗಿದೆ:

ಮಂಗನ್ನ ನೋಡಿದೆನೋ ನಾನೊಂದು |
ಕೆಂಪಮಾರಿಯ | ಮಂಗನ್ನ ನೋಡಿದೆನೋ

ಮಂಗನ್ನ ನೋಡಿದೆ ಹಂಗಿಲ್ಲ ಯಾರದು
ಹಿಂದುಸ್ತಾನದ ಅನ್ನಾತಿನ್ನೋ ಹಂದಿಕುಲದ | ಮಂಗನ

ಕಾಲು ಕುಬಸದ ಮಂಗ | ಮ್ಯಾಲೆ ಟೊಪ್ಪಿಗುಳ್ಳ ಮಂಗ
ಹಾಲುಂಡ ದೇಶದ ಮ್ಯಾಲೆ ಹಲ್ಲೆ ಮಾಡಿತೋ ಮಂಗ | ಮಂಗನ

ಮೀಸಿ ಇಲ್ಲದ ಮಂಗ | ವಿಶ್ವಾಸಗೇಡಿ ಮಂಗ
ಹಿಂದುಸ್ತಾನದ ಹೇಸಿಗೆ ತಿನ್ನೋ ಮಂಗ ||

ಜನಸಾಮಾನ್ಯರಿಗೆ ಅರ್ಥವಾಗುವಂತೆ ಬ್ರಿಟಿಷರನ್ನು ಅವಹೇಳನ ಮಾಡಿರುವ ಈ ಹಾಡು ಬಹಳಷ್ಟು ಪ್ರಚಾರದಲ್ಲಿತ್ತು.

ಭಾರತಮಾತೆಗೆ ಹೊಸ ಅವತಾರವನ್ನು ಕಲ್ಪಿಸಲಾಯಿತು. ದೇವಿ, ಶಕ್ತಿಯರು ನಮಗೆ ಪರಿಚಿತರು. ಅವರೊಂದಿಗೆ ಭಾರತಮಾತೆಯನ್ನು ಸಮೀಕರಿಸಿ ಅವಳ ಮಹಿಮೆಯನ್ನು ವರ್ಣಿಸಲಾಯಿತು. ಈ ದೇಶದಲ್ಲಿ ದೇವರ ಬಗೆಗಿರುವ ಗೌರವ ಪೂಜ್ಯಭಾವನೆ ಯಾರ ಬಗ್ಗೆಯೂ ಇಲ್ಲ. ಭಾರತ ಮಾತೆಯನ್ನು ಅಂಥ ಪೂಜ್ಯ ಸ್ಥಾನಕ್ಕೇರಿಸಿ ಭಾವುಕರಿಗೆ ದೇಶಭಕ್ತಿಯನ್ನು ಬಿಂಬಿಸಲು ಪ್ರಯತ್ನಿಸಲಾಯಿತು.

ಭಾರತಮಾತೆ ನೀನು
ತೋರೆ ಕರುಣವನ್ನು
ಬಾರಿ ಬಾರಿಗೆ ನಾನು
ಸ್ಮರಣೆ ಮಾಡುವೆನು
ಪರಿಪಾಲಿಸ ಜನನಿ |
ಮರಿಯದೆ ಪೊರೆಯ ನಾರನವಾಣಿ ||

ಮೇರು ಪರ್ವತವನ್ನು
ಕಿರೀಟ ಮಾಡಿದಿ ನೀನು
ಕ್ಷೀರ ಸಮುದ್ರವನ್ನು
ಸೀರಿ ಉಟ್ಟಿವ್ವ ನೀನು
ಮೂರು ಲೋಕದ ಜ್ಞಾನಿ |
ಪಾರಮಾಡ ಸರ್ವರ ಸಂಪನ್ನಿ || (ಭೀಮಕವಿ)

ಓಣಿಗೆ ಹಳ್ಳಿಯ ಜನತೆಗೆ ಭಾರತಮಾತೆಯನ್ನು ಪರಿಚಯಿಸಲಾಯಿತು. ಆ ಮಾತೆ ನಮ್ಮೆಲ್ಲರ ತಾಯಿ. ಅವಳ ಯೋಗಕ್ಷೇಮ ಮಕ್ಕಳಾಗಿರುವ ನಮ್ಮ ಕರ್ತವ್ಯವಲ್ಲವೇ ? ಆ ಕರ್ತವ್ಯದಿಂದ ವಿಮುಖರಾದ ಮಕ್ಕಳನ್ನು ಎಚ್ಚರಿಸುತ್ತ

ಹಡದ ತಾಯಿಯಂತೆ ನಮ್ಮ ನಾಡತಾಯಿ ಪಾಡ ಎಂದು
ನೋಡಿಕೊಂಡ ಮಾಡಬೇಕ ಆಕಿ ಸೇವಾ।
ರೂಢಿಯೊಳು ಮೂಢ ಜನರು ಗಾಢ ನಿದ್ರೆಯಲ್ಲಿ ಮುಳುಗಿ
ಖೋಡಿತನದ ಕಷ್ಟಕ್ಕೀಡಾತ ಜೀವಾ। ಇವರಿಗಿಲ್ಲ ಅರವ॥

ಅನ್ನಾ ಕೊಡುವ ಪುಣ್ಯಜನನಿಗನ್ಯಾಯ ಮಾಡಿದಾರ
ಇನ್ನೂ ಬಿಡವಲ್ಲ ಮೈಯ್ಯಾನ ದೇವ್ರ।
ಮಾನ್ಯವಾದ ಕಾಂಗ್ರೆಸದ ಬೆನ್ನ ಹತ್ತಿದರ ಮುನ್ನ
ಚೆನ್ನಾಗಿ ದಾಟುದು ಬಂದ ಸಾವಾ। ಕಾಯತಾನ ದೇವಾ॥ (ಭೀಮಕವಿ)

ಎಂದು ತಿಳುವಳಿಕೆ – ಧೈರ್ಯ ನೀಡಲಾಗಿದೆ.

ರಾಷ್ಟ್ರೀಯ ಚಳುವಳಿಗೆ ನಾನಾ ಮುಖಗಳಿದ್ದವು. ಅಸ್ಪೃಶ್ಯತಾ ನಿವಾರಣೆ.. ಮದ್ಯಪಾನ ನಿಷೇಧ. ಖಾದಿ ಧರಿಸುವುದು ಇತ್ಯಾದಿ. ಇವನ್ನೆಲ್ಲ ಕುರಿತು ಗೀಗೀ ಪದಗಳು ರಚನೆಗೊಂಡಿವೆ. ಹಳ್ಳಿಗರಿಗೆ ಮನವರಿಕೆಯಾಗುವಂತೆ ಈ ವಿಷಯಗಳನ್ನು ತಿಳಿಸುವುದು ಪ್ರಯಾಸದ ಕೆಲಸವಾಗಿತ್ತು. ಶತ ಶತಮಾನಗಳಿಂದ ಬೆಳೆದು ಬಂದಿರುವ ಅಸ್ಪೃಶ್ಯತೆಯ ಬಗ್ಗೆ ತಿಳಿ ಹೇಳುವುದು ಎಷ್ಟೋ ಸಲ ಅಪಾಯಕಾರಿಯೆನಿಸಿತ್ತು. ಇಂಥ ಸೂಕ್ಷ್ಮ ವಿಷಯವನ್ನು ಕವಿಗಳು ನೇರವಾಗಿ ಸೋದಾಹರಣವಾಗಿ ತರ್ಕಬದ್ಧವಾಗಿ ನಿರೂಪಿಸಿದ್ದನ್ನು ಈ ಹಾಡಿನಲ್ಲಿ ಕಾಣಬಹುದು –

ಎಲ್ಲಿ ಕೂತಿತ್ತ ಯಾವ ಕಡಿಯಿಂದ ಬಂತ ಏನೇನ ಮಾಡಿತ ಚಳವಳಿ
ಎಲ್ಲಾ ಜಾತಿ ಕೂಡಿ ಏಕ ಆಗುದಂತ ನಮಗ ಬಂದಿತರಿ ಎಂಥ ಬಗಳಿ॥ ಪ ॥

ಹಿಂಗ ಅನ್ನುವವರು ತುಂಬಿದಾರ ನಾಡಾಗ ಧರ್ಮದ ಅಭಿಮಾನ ಅವರಿಗೆ ಹೆಚ್ಚ
ಹೆಂಗ ಮಾಡೂನ ಇನ್ನ ಕಾಂಗ್ರೆಸ್‌ದವರು ತಂದ ಇಟ್ಟಾರಂತಾರ ಪೇಚ।

ಹರಿಜನರ ಕಂಡರ ದೂರ ಸರಿಯತಾರ ಮುಟ್ಟಬೇಡಂತಾರ ಸ್ವಚ್ಛ
ಹೊರಗ ಹೋದಲ್ಲಿ ಮರತಿರತಾರ ಕುಲಾ ಮನಿಗಿ ಬಂದ ಆಗತಾರ ಊಚ।

ಮೋಟರದಾಗ ಇವರನ್ನ ತುರುಕಿ ತುಳೀಲಿಕ್ಕೆ ಹತ್ತಿರತಾರ ಕಚಾಪಚಾ
ಏಟು ಉಳಿಯೋದಿಲ್ಲ ಕೈಯ್ಯಾನ ರೊಕ್ಕ ಮೈಯ್ಯೆಲ್ಲಾ ಆಗತದ ನುಚನುಚ್ಚಾ॥

ಚಹಾದ ಅಂಗಡಿಹೊಕ್ಕ ಏಕಾಗಿ
ಮನಿಯಾಗ ಆಗಿರತಾರ ದೊಡ್ಡ ಯೋಗಿ॥

ಹೇಳಿದರ ಬರತsತಿ ನಗೀs
ನಾಚಿಕಿ ಇಲ್ಲsರಿ ಇವರೀಗಿ॥

ಎಲ್ಲಾ ಜಾತಿಯವರು ಕೂಡಿ ಏಕಾಗಿ
ಶಿಂದಿ ಮಗಿ ಹಚ್ಚುವರು ಬಾಯಿಗಿ ||

ಹರಿಜನರನ್ನ ನೆಲದ ಮ್ಯಾಲಿಟ್ಟ ಉಳಿದವರು ಆದಾರೇನ ಅಂತರಾಳಿ || ( ಭೀಮಕವಿ)

ಚಳುವಳಿಯ ಒಂದು ಅಂಗವಾಗಿ ನಡೆದ ಅಸ್ಪೃಶ್ಯತಾ ನಿವಾರಣೆಯ ಹೋರಾಟವನ್ನು ಸಂಪ್ರದಾಯಸ್ಥರು ವಿರೋಧಿಸಿದ್ದು ಸಹಜವೇ. ಇಂಥ ವಿರೋಧವನ್ನು ಕಾಂಗ್ರೆಸ್ ಉಪಾಯವಾಗಿ ಎದುರಿಸಬೇಕಾಯಿತು. ಈ ಎಲ್ಲ ಅಂಶಗಳು ಮೇಲಿನ ಹಾಡಿನಲ್ಲಿ ವಿವರಿಸಲ್ಪಟ್ಟಿವೆ.

ಅಂದು ಚರಖಾ ದೇಶಭಕ್ತಿಗೆ ಸಂಕೇತವಾಗಿತ್ತು. ಸ್ಥಳೀಯ ಗೃಹ ಕೈಗಾರಿಕೆಗಳನ್ನು ದಿವಾಳಿಯೆಬ್ಬಿಸಿ ಅಟ್ಟಹಾಸದಿಂದ ಮೆರೆಯುತ್ತಿದ್ದ ಬ್ರಿಟಿಷ್ ಆಡಳಿತಶಾಹಿಗೆ ಪ್ರತಿರೋಧವೆಂಬಂತೆ ಗಾಂಧೀಜಿ ಚರಖಾ ರೂಢಿಗೆ ತಂದರು. ಅದು ಏಕಕಾಲಕ್ಕೆ ಸ್ವಾವಲಂಬನೆ ಮತ್ತು ಶೋಷಣೆಯಿಂದ ಬಿಡುಗಡೆ ಎರಡನ್ನೂ ಸಾಧಿಸುವ ಸಾಮರ್ಥ್ಯ ಪಡೆದಿತ್ತು. ಅಂಥ ಚರಖಾದ ಮಹತ್ವವನ್ನು

ಗಿರಣಿ ಬಂದಾಗಿನಿಂದ ಬರಲಿಲ್ಲ ಮುಂದಕ
ಮೂಲಿಗಿ ಬಿದ್ದಿತ ನಮ ಚರಖ |
ಗಾಂಧಿ ಮಹಾರಾಜರು ತಂದಾರ ಬೈಲಿಗೆ
ಚಾಲು ಮಾಡಲಾಕ ಈ ಚರಖ ||

ನೇಕಾರ ಜನರಿಗೆ ತವರೂರ ಇದ್ದಂಗ
ಬೇಕಾದ ಕೊಡುವುದು ಈ ಚರಖ |
ರೈತರ ಮನಿಯಾಗ ಸ್ಥಿರವಾಗಿ ನಡದರ
ಪಕ್ವಾನ್ನ ಉಣಿಸುವುದು ಈ ಚರಖ || ( ಭೀಮಕವಿ)

ಹೀಗೆ ವಿವರಿಸಲಾಗಿದೆ. ಚರಖದಿಂದ ಉತ್ಪನ್ನವಾಗುವ ಖಾದಿ ಶ್ರೇಷ್ಠವಾದುದು. ಅದು ಪರಿಶ್ರಮ ಮತ್ತು ಸ್ವಾವಲಂಬನೆಗಳಿಗೆ ಸಂಕೇತವಾಗಿರುವಂಥದು. ನಿಜ. ಆದರೆ ಗಿರಣಿ ಬಟ್ಟೆಯ ಮುಂದೆ ಖಾದಿ ಒರಟಾಗಿ ಕಂಡಿತು. ಖಾದಿಯ ತಾತ್ವಿಕತೆ ಅರಿಯಲಾರದವರು ಗಿರಣಿ ಬಟ್ಟೆಗೆ ಮೋಹಗೊಳ್ಳುವುದು ಸಹಜ. ಇಂಥವರಿಗೆ ಎಚ್ಚರಿಕೆ ತಿಳುವಳಿಕೆಗಳೆರಡನ್ನು ನೀಡಬೇಕಲ್ಲವೇ ?

ಖರೆ ಖರೆ ಹೇಳತೀನಿ ಬರಬರತ ದಿನಮಾನ
ಬರತಾವ ಬಾಳ ಚೆಂದ |
ಪರದೇಶಿ ಗಿರಣಿ ಅರಿವಿ ಧರಿಸುವವರಿಗೆ
ಅಬರು ಇಲ್ಲರಿ ಮುಂದ ||

ಆರುದುಡ್ಡಿನ ಖಾದಿ ಟೊಪ್ಪಿಗೆಗೆ
ಮುಂದ ಆರ್ಭಾಟ ಹೆಚ್ಚೆಂದ |
ಅರವತ್ತು ರೂಪಾಯಿ ಜರದ ರುಮಾಲದವರು
ಕೊರವರಕ್ಕಿಂತ ಹಿಂದ ||

ಇರುವಂಥಾ ಅರಿವಿ ಹರದ ಮ್ಯಾಲ ಇನ್ನ
ತರೋದ ಮಾಡಿರಿ ಬಂದ|
ತರುವಂಥಾ ಜನರಿಗೆ ಅರುವಿರಲೆಂತ
ಹೇಳುವೆ ಕರ ಮುಗಿದ || (ಭೀಮಕವಿ)

ಹೀಗೆ ಖಾದಿಯ ಮಹತ್ವವನ್ನು ಮುಂದೆ ಅದು ಗಳಿಸಿಕೊಳ್ಳ ಬಹುದಾದ ಗೌರವದ ಸ್ಥಾನಮಾನವನ್ನು ಭರವಸೆಯಿಂದ ವಿವರಿಸಲಾಗಿದೆ. ಗಿರಣಿ ಬಟ್ಟೆಯನ್ನು ತ್ಯಜಿಸಲು ಕಳಕಳಿಯಿಂದ ವಿನಂತಿಸಿಕೊಳ್ಳಲಾಗಿದೆ.

ಖಾದಿ ಟೊಪ್ಪಿಗೆಗೆ ಗಾಂಧಿ ಟೊಪ್ಪಿಗೆ ಎಂದು ಹೆಸರು ಬಂದಿತು. ಗಾಂಧಿ ಟೊಪ್ಪಿಗೆ ಧರಿಸುವುದು ದೇಶಭಕ್ತನ ಲಕ್ಷಣವಾಗಿತ್ತು. ಆ ಟೊಪ್ಪಿಗೆ ಗಾಂಧೀಜಿಯ ಸಾಧನೆಗಳಿಗೆ ದ್ಯೋತಕವಾಗಿ ರಾಷ್ಟ್ರೀಯ ಹೋರಾಟಗಳಿಗೆ ಪ್ರೇರಕ ಶಕ್ತಿಯಾಗಿ ವಿಜೃಂಭಿಸಿತು. ಅಂದಿನ ಆಡಳಿತಶಾಹಿ ಗಾಂಧಿ ಟೊಪ್ಪಿಗೆ ಕಂಡರೆ ಹೆದರುವ ಪರಿಸ್ಥಿತಿ ಉಂಟಾಯಿತು. ಅಂಥ ಟೊಪ್ಪಿಗೆಯ ಬಗ್ಗೆ ರಚಿಸಿರುವ ಹಾಡೊಂದು ಹೀಗಿದೆ –

ಟೊಪ್ಪಿಗಿ ಹಾಕಿದೆನೊ ನಾನೊಂದು
ಟೊಪ್ಪಿಗಿ ಹಾಕಿದೆನೋ ||

ದಕ್ಷಿಣಾಫ್ರಿಕಕ ಹೋದ ಟೊಪಿಗಿ
ಭಂಗಿ ಕೆಲಸಾ ಅಲ್ಲಿ ಮಾಡಿದ ಟೊಪಿಗಿ
ಫಿಜಿಯೊಳು ಕಲ್ಲ ವಡದ ಟೊಪಿಗಿ
ಯರೋಡಾ ಜೇಲದೊಳಗ ಬೀಸಿದ ಟೊಪಿ ||

ರಾಜವಾಡೆದಾಗ ಹೋದ ಟೊಪಿಗಿ
ರಾಜನ ಮುಂಗೈ ಹಿಡಿದ ಟೊಪಿಗಿ
ಅರಮನಿಯೊಳಗ ಹೋಗಿ ಬಂದ ಟೊಪಿಗಿ
ರಾವುಂಡ ಟೇಬಲದಾಗ ಮೆರೆದ ಟೊಪಿಗಿ ||

ಸತ್ಯಮಾರ್ಗವ ಹಿಡಿಸುವ ಟೊಪಿಗಿ
ಸತ್ಯಾಗ್ರಹವ ಮಾಡಿದ ಟೊಪಿಗಿ
ಭೃತ್ಯ ಕೆಲಸವ ಮಾಡುವ ಟೊಪಿಗಿ
ಮಿಥ್ಯ ಅಲ್ಲ ಮಹಾತ್ಮನ ಟೊಪಿಗಿ ||

ಕೈಯ ನೂಲಿನದು ಖಾದಿ ಟೊಪಿಗಿ
ಕೈಗಾರಿಕೆಯ ಕಲಿಸುವ ಟೊಪಿಗಿ
ಭೀಮಸಿಂಗಗ ಒಲದ ಟೊಪಿಗಿ
ಚೆಂದವಾದ ಬಿಳೆ ಗಾಂದಿ ಟೊಪಿಗಿ ||

(ಭೀಮಕವಿ)

ಜನರನ್ನು ಚಳವಳಿಗೆ ಪ್ರೇರೇಪಿಸುವುದರೊಂದಿಗೆ ರಾಷ್ಟ್ರೀಯ ಜೀವನದ ಆಗುಹೋಗುಗಳನ್ನು ಹಾಡಿನರೂಪದಲ್ಲಿ ತಿಳಿಸುವ ಜವಾಬ್ದಾರಿಯನ್ನು ಈ ಕವಿಗಳು ಚೆನ್ನಾಗಿ ನಿರ್ವಹಿಸಿದ್ದಾರೆ. ಗಾಂಧೀಜಿಯವರ ಜೀವನದ ಪ್ರಮುಖ ಘಟನೆಗಳ ಬಗ್ಗೆ. ಅವರು ಕೈಕೊಂಡ ವಿಧಾಯಕ ಕಾರ್ಯಗಳ ಬಗ್ಗೆ. ನಡುಗಾಲ ಸರಕಾರಿ ರಚನೆ ಮತ್ತು ಅದರ ಸಾಧನಗಳ ಬಗ್ಗೆ ಅಲ್ಲಲ್ಲಿ ನಡೆಯುತ್ತಿದ್ದ ಪಿಕೆಟಿಂಗ್ – ಘರ್ಷಣೆಗಳ ಬಗ್ಗೆ ಹಾಡು ರಚಿಸಿದ್ದಾರೆ. ರಾಷ್ಟ್ರೀಯ ನಾಯಕರಾದ ಗಾಂಧೀಜಿ ಸುಭಾಸ. ನೆಹರೂ ಅವರನ್ನು ಕುರಿತು ಬಹಳಷ್ಟು ಹಾಡುಗಳು ಹುಟ್ಟಿಕೊಂಡಿವೆ. ಈ ನಾಯಕರ ಪೌರಾಣೀಕರಣ ಕುತೂಹಲಪೂರ್ಣವಾಗಿದೆ. ಜನಸಾಮಾನ್ಯರಿಗಾಗಿ ಅವರನ್ನು ಪುರಾಣದ ವ್ಯಕ್ತಿಗಳೊಡನೆ ಸಮೀಕರಿಸಬೇಕಾಯ್ತು. ಸುಭಾಸರ ಸಾಹಸ ಜೀವನ ಲಾವಣಿ ಕವಿಗಳ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದೆ. ಅಂದಿನ ಹೋರಾಟದ ಸಂದರ್ಭದಲ್ಲಿ ಹುತಾತ್ಮರಾದ ಭಗತಸಿಂಗ್ ಮೈಲಾರ ಮಹಾದೇವಪ್ಪನಂತವರ ಬಗ್ಗೆ ಹಾಡು ರಚಿಸಿ ಹಾಡಿದ್ದಾರೆ. ಐತಿಹಾಸಿಕ ವ್ಯಕ್ತಿಗಳಾದ ಸಂಗೋಳ್ಳಿರಾಯಣ್ಣ ಕಿತ್ತೂರ ಚೆನ್ನಮ್ಮ ಮುಂತಾದವರ ಬಗೆಗಿನ ಹಾಡುಗಳು ದೇಶಭಕ್ತಿಯನ್ನು ಉದ್ದೀಪಿಸಲು ಕಾರಣವಾದವು.

ರಾಷ್ಟ್ರೀಯ ಗೀಗೀ ಮೇಳದವರ ಸೇವಾ ಭಾವನೆ ಮರೆಯುವಂತಿಲ್ಲ. ಕಲ್ಗಿ – ತುರಾ ಮೇಳಗಳಷ್ಟು ಆಮಂತ್ರಣ ಇವರಿಗೆ ಹೇಗೆ ಬರಲು ಸಾಧ್ಯ ? ಕಚಗುಳಿ ಇಟ್ಟಂತೆ ಭಾವೋದ್ದೀಪನಗೊಳಿಸಿ ಮನರಂಜನೆ ನೀಡುವ ಕಲ್ಗಿ – ತುರಾ ಮೇಳಗಳ ಹಾಡುಗಾರಿಕೆಯನ್ನು ಬಹುಸಂಖ್ಯಾತರು ಇಷ್ಟಪಡುವುದರಲ್ಲಿ ತಪ್ಪಿಲ್ಲ. ದೇಶ. ಸ್ವಾತಂತ್ರ್ಯ. ಖಾದಿ. ಗಾಂಧಿ. ಇತ್ಯಾದಿಗಳ ಬಗೆಗಿನ ಗಂಭೀರ ಹಾಡುಗಳನ್ನು ಇಷ್ಟಪಟ್ಟು ಕೇಳುವವರ ಸಂಖ್ಯೆ ಕಡಿಮೆ. ಹಾಗೇ ಈ ಮೇಳಗಳಿಗೆ ಪ್ರೋತ್ಸಾಹವೂ ಕಡಿಮೆ ಆದರೂ ಇವರು ಸೇವಾ ಮನೋಭಾವದಿಂದ ನಿಷ್ಠೆಯಿಂದ ರಾಷ್ಟ್ರೀಯ ಪದಗಳನ್ನು ಹಾಡುವ ಪರಂಪರೆ ಬೆಳೆಸಿ ಉಳಿಸಿಕೊಂಡು ಬಂದಿದ್ದಾರೆ. ಸ್ವಾತಂತ್ರ್ಯ ಬಂದ ನಂತರ ಇಂಥ ಮೇಳಗಳು ಸರ್ವೋದಯ ಪ್ರಚಾರ. ಸರಕಾರಿ ಯೋಜನೆಗಳ ( ಕುಟುಂಬ ಯೋಜನೆ. ಸಾಕ್ಷರತೆ. ಮದ್ಯಪಾನ ನಿಷೇಧ) ಪ್ರಚಾರ ಕಾರ್ಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲಾರಂಭಿಸಿದವು. ಇವುಗಳನ್ನು ಅನುಕರಿಸಿ ಕಲ್ಗಿ – ತುರಾ ಮೇಳಗಳೂ ಇಂಥ ಹಾಡುಗಳನ್ನು ಹಾಡುವುದನ್ನು ರೂಢಿಸಿಕೊಂಡವು.

ರಾಷ್ಟ್ರೀಯ ಲಾವಣಿಗಳಲ್ಲಿ ಸಾಹಿತ್ಯಿಕ ಗುಣಮಟ್ಟ ಕಡಿಮೆ. ನಿಶ್ಚಿತ ಉದ್ದೇಶಕ್ಕಾಗಿ ಉಪಲಬ್ಧ ಮಾಹಿತಿಯನ್ನು ಮುದ್ದಾಮಾಗಿ ಕವಿತೆಗೆ ಒಗ್ಗಿಸುವಾಗ ಹೀಗಾಗುವುದು ಸಹಜ. ಸಾಂಪ್ರದಾಯಿಕ ಲಾವಣಿಗಳಲ್ಲಿದ್ದ ಬಂಧ. ಪ್ರಾಸವೈಭವಗಳು ಈ ರಚನೆಗಳಲ್ಲಿ ಇಳಿದು ಬರಲಿಲ್ಲ. ಪ್ರಚಾರ ಸಾಮಗ್ರಿಯನ್ನು ಹಾಡಾಗಿಸುವಾಗ ಅಂಕಿ ಸಂಖ್ಯೆಗಳು. ಹೆಚ್ಚಿಗೆ ಗ್ರಾಂಥಿಕ ಪದಗಳು ಬಳಕೆಯಾದವು. ಇಂಥ ಕೊರತೆಗಳಿದ್ದರೂ ಈ ಹಾಡುಗಳ ಸಂವಹನ ಕ್ರಿಯೆಗೆ ಏನೂ ತೊಡಕಾಗಲಿಲ್ಲ.

ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ರಾಷ್ಟ್ರೀಯ ಲಾವಣಿ / ಗೀಗೀ ಪದಗಳನ್ನು ಹಾಡಿದ ಬಹಳಷ್ಟು ಕಲಾವಿದರು ಕಣ್ಮರೆಯಾಗಿದ್ದಾರೆ. ಇರುವ ಕೆಲವರಿಂದ ಆ ಹಾಡುಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸುವ ಕಾರ್ಯ ನಡೆಯಬೇಕಾಗಿದೆ.

---

## ಅನುಬಂಧ

### ಚಳವಳಿ ಪದಾ

*[ಇದು ಹುಲಕುಂದ ಭೀಮಕವಿಯ ರಚನೆ. ಹಾಡಿನುದ್ದಕ್ಕೂ ಮಹಾಭಾರತದ ಪಾತ್ರ ಸನ್ನಿವೇಶಗಳನ್ನು ಸಮಕಾಲೀನ ನಾಯಕರು – ಸನ್ನಿವೇಶಗಳಿಗೆ ಹೋಲಿಸಿರುವುದನ್ನು ಗಮನಿಸಬಹುದು]*

ಚಳವಳಿ ಅಂದರೇನ ತಿಳಿಸಿ ಹೇಳತೇನ
ಕೂತ ಕೇಳರಿ ಸರ್ವಜನಾ|
ಬೇಕಾ ಬಿಟ್ಟಿ ತಿರುಗುವಂಥಾ ಜನರನ್ನ ಎಳಕೊಂಡ
ಬಾಳ್ವೆಕ ಹಚ್ಚೋದು ಚಳವಳಿರಣ್ಣಾ||

ಕಟಪಟ ಮಾಡಿ ನಿಮ್ಮ ಚಟಗಳ ಬಿಡಿಸಲಿಕ್ಕೆ
ಕೈಕಾಲ ಬೀಳುವದು ಒಂದೇ ಸವನಾ|
ಸಟಿ ಮಾತ ಅಲ್ಲ ಸತ್ಯ ತಿಳಿಯಿರಿ
ರಾಷ್ಟ್ರಕ್ಕಾಗಿ ಆಗೋದು ಸಣ್ಣಾ||

ಅರೆಹೊಟ್ಟೆ ಉಣ್ಣುವವರಿಗೆ ಪೂರಾ ಕೊಡಿಸಲಿಕ್ಕೆ
ಘೋರ ಬಿಟ್ಟ ಮಾಡೋದು ಕದನಾ|
ಹಿರಿಯ ಸಂಪತ್ತಿನಿಂದ ಮೆರೆಯುವ ಜನರಿಗೆ
ಗುರುಬೋಧ ಕೊಡುವುದು ದಿನಾದಿನಾ||

ಸಣ್ಣವರ ದೊಡ್ಡವರ ಭಿನ್ನಭೇದವಿಲ್ಲ
ಮನ್ನಣೆ ಕೊಡುವುದು ಸಂಪೂರ್ಣ|
ಉನ್ನತ ಖಾದಿಯ ಚೆನ್ನಾಗಿ ಧರಿಸಿ
ಚಿನ್ನದಂತೆ ಇರುವುದು ಹಸನಾ||

ಕೌರವರ ಗುಣದ ಫಿರಂಗ್ಯಾರ ಕೈಯಾಗ ಸಿಕ್ಕ
ಸೆರೆಯಾಳಗಿತ್ತ ಇಲ್ಲಿತನಾ|
ಪಾಂಡವರಂತೆ ವನವಾಸ ಸೋಸಿ
ಮರಮರಗಿ ಆದೀತ ಜೀರ್ಣ||

ಶಕುನಿಯಂಥಾ ಭಾರತಮಂತ್ರಿ ಕುಟಿಲತಂತ್ರದಿಂದ
ಕಳದಿಟ್ಟ ಭಾರತ ಮಾತೆಯನಾ|
ತುರಂಗ ಎಂಬುವ ಅರಗಿನ ಮನೆಯಿಂದ
ಪಾರಾಗಿ ಬಂತ ಆಗಲಿಲ್ಲ ಏನಾ||

ಚಾಲ – ಸ್ವಯಂಸೇವಕರಾಗಿ ತಿರಕೊಂಡಾ
ಪಾಂಡವರಂತೆ ಆತ ಬಾಳಬಂಡಾ |

ಮನಿ ಮನಿ ಭಿಕ್ಷಾ ಇಸಗೊಂಡಾ
ತಿಳಿಸುವದ ಬೇಕಾದಲ್ಲಿ ಉಂಡಾ ||

ಎಷ್ಟೋ ಮಂದೀವ ಹೋದಾವ ರುಂಡಾ
ಎಡಗೈಯ್ಯಾಗ ಜೀವಾ ಹಿಡಕೊಂಡಾ |

ಏರ – ನೋಡಿದಿರಿ ನೀವು ಕೂಡಾ ಅಭಿಮನ್ಯುನಂಥ ಮಿಗಿಲಾದವನೊಬ್ಬ
ಭಗತಸಿಂಗನು ಕೊಟ್ಟನು ಪ್ರಾಣ || ೧ ||

ಮೂರು ಲೋಕದ ಗಂಡ ಅರ್ಜುನನಂತೆ
ಜವಾಹಿರಲಾಲ ನೆಹರೂ ಪ್ರಖ್ಯಾತಿ
ಭೀಮಸೇನನಂತೆ ಆರ್ಭಾಟ ಮಾಡುವ
ಸುಭಾಸ ಬೋಸರು ರಾಷ್ಟ್ರಪತಿ ||

ಧರ್ಮರಾಜನಂತೆ ಸೌಮ್ಯಗುಣದವ
ಅಬ್ದುಲ್ ಗಫಾರಖಾನ ಮಹಾಮೂರ್ತಿ |
ನಕುಲ ಸಹದೇವರಂಬೊ ಸ್ವಯಂ ಸೇವಕರು
ಹಗಲಿ ರಾತ್ರಿ ಮಾಡತಾರ ಚಿಂತಿ ||

ದ್ರೌಪದಿ ತಾಯಿಯೆಂಬ ಸ್ವತಂತ್ರ ಭೂದೇವಿಯ
ಮಾನ ಉಳಿಸೋದಕ್ಕ ಮಾಡತಾರ ಯುಕ್ತಿ |
ಕೃಷ್ಣ ಪರಮಾತ್ಮನಂತೆ ಮಹಾತ್ಮಾ ಗಾಂಧಿಯವರು
ತಯಾರಾಗಿ ನಿಂತಾರ ಸಾರಥಿ ||

ಕುದುರಿರಥಾ ಹೊಂಟಾಂಗ ಆಕ್ಷಣಕ
ಲಗಾಮ ತಗೊಂಡಾನ ತನ್ನ ಹಂತಿ |
ರಾಟಿಯೆಂಬೊ ಸುದರ್ಶನ ಚಕ್ರವ ತಿರವತಾನ
ಬಿಟ್ಟೂ ಬಿಡದವ ಅವ ದಿನಂಪ್ರತಿ ||

ಸತ್ಯ ಶಾಂತಿಯೆಂಬೊ ಬಾಣ ತಯಾರ ಮಾಡಿ
ಕೊಟ್ಟ ಬಿಟ್ಟಾನ ಪಾಂಡವರಂತಿ |
ಅದೇ ಬಾಣಾ ಇವರು ಉಪಯೋಗ ಮಾಡಿದರ
ದೊರಿತದ ನೋಡ ಹಸ್ತಿನಾವತಿ ||

ಚಾಲ – ಅಜ್ಞಾತವಾಸ ಪರದೇಶವನ್ನಾ
ದಾಟಿದರ ಆಗತದ ಹಸನಾ ||

ಅದರ ಸಲುವಾಗಿ ಗಾಂಧಿ ಭಗವಾನಾ
ಹಗಲಿರುಳು ಕಟಪಟಿ ಮಾಡುವನಾ ||

ಪಾರಾದಿಂದ ಘೋರ ಇಲ್ಲಿ ಏನಾ
ಸ್ವರಾಜ್ಯ ಪಾಂಡವರ ಸ್ವಾಧೀನಾ

ಏರ – ವಿರಾಟನಗರವೆಂಬೊ ಕೀಚಕನ ಕಮಿಟಿಯೊಳು
ಕುಂತಿ ಪುತ್ರರು ಆಗತಾರ ಸಣ್ಣಾ || ೨ ||

ದ್ವಾಪರಯುಗದಂತೆ ಕಲಿಯುಗದೊಳಗ
ಚಾಲೂ ಆಗತಾವ ಅವತಾರಾ |
ಕರ್ಣನೆಂಬುವಂಥಾ ಸಂಸ್ಥಾನದವರನ್ನ
ಇಂಗ್ಲೀಷರು ಬಾಲಾ ಬಡಿಯುವರಾ ||

ಕವಚಕುಂಡಲಾ ಕಸಗೊಳ್ಳಲಿಕ್ಕೆ
ಮಹಾತ್ಮಾ ಮಾಡತಾನ ವಿಚಿಯಾರಾ |
ಕಸಕೊಂಡಮ್ಯಾಲ ಕೌರವರ ಕಡೆಯಿದ್ದ
ಕರ್ಣ ಸಾಯೋದು ನಿರ್ಧಾರಾ ||

ತಮ್ಮ ದೇಶದ ಅನ್ನಾ ತಾವು ತಿಂದು
ಫಿರಂಗ್ಯಾರ ಬೆನ್ನ ಕಟ್ಟುವರಾ |
ಪ್ರಜಾಸತ್ತಾತ್ಮಕ ರಾಜ್ಯ ಆಗಲೆಂತ
ಸಂಸ್ಥಾನ ಪ್ರಜೆಗಳು ಅನ್ನುವರಾ ||

ದೂರಯಾಕ ಮೈಸೂರ ಸಂಸ್ಥಾನದಾಗ
ವಿದುರಾಶ್ವತ್ಥದಲ್ಲಿ ಆತ ಅತ್ಯಾಚಾರ |
ಚಳವಳಿ ಮಾಡುವ ಪ್ರಜೆಗಳ ಮೇಲೆ
ಅಪಘಾತ ಮಾಡಿದರ ಗೋಳಿಬಾರಾ ||

ಮೂವತ್ತೆರಡು ಮಂದಿ ಪ್ರಾಣಬಿಟ್ಟರಾ
ನಾಲ್ವತ್ತೆಂಟು ಮಂದಿ ಗಾಯ ಹೊಂದಿದರಾ
ಅಲ್ಲೋಲ ಕಲ್ಲೋಲವಾಗಿ ವಲ್ಲಭಭಾಯಿಯವರು
ಸಲ್ಲಾ ಮಾಡಿ ಧ್ವಜಾ ಏರಿಸಿದರಾ ||

ಚಾಲ – ಇದನ್ನ ನೋಡಿ ಜಮಖಂಡಿ ಸಂಸ್ಥಾನಾ
ಅಪ್ಪಾ ಸಾಹೇಬ ತಗದಾನ ರಚನಾ ||

ಪ್ರಜಾ ಅಧ್ಯಕ್ಷರ ಕರಿಸ್ಯಾನಾ
ಅಲ್ಪ ಸ್ವಲ್ಪ ಸವಲತ್ತ ಮಾಡಿದಾನಾ ||

ಉಳಿಕಿದವರು ತೆರಿದರಪ್ಪಾ ಕಣ್ಣಾ
ಒಳಗಿಂದೊಳಗ ನಡಿಸ್ಯಾರ ಕಲ್ಪನಾ ||

ಏರ – ಸ್ವರಾಜ್ಯ ದೊರೆ ದೊರೆಯುವದೆಂದು
ಭೀಮರಾಯ ಮಾಡಿದ ಕವನಾ || ೩ ||

**( ಸ್ವಾತಂತ್ರ್ಯ ಸಮರದ ಗೇಯ ಗೀತೆಗಳು – ಪುಟ 38–40)**

**42 ರ ಚಳವಳಿ**

*[ಈ ಹಾಡಿನ ಕರ್ತೃ ಬೆಳಗಾಂವಿ ಜಿಲ್ಲೆಯ ತಿಗಡೊಳ್ಳಿ ( ಚೆನ್ನಮ್ಮನ ಕಿತ್ತೂರ ಸಮೀಪ) ಗ್ರಾಮದ ಮರಿಕಲ್ಲಪ್ಪ ಮಲಶೆಟ್ಟಿ. ಕವಿ ಸ್ವತಃ 42 ರ ಚಳವಳಿಯಲ್ಲಿ ಪಾಲ್ಗೊಂಡವನು]*

ಸಣ್ಣ ಮಾತ ಅಲ್ಲ ಕೇಳರಿ ಸನ್ ಹತ್ತೊಂಭತ್ತನೂರಾ
42 ನೇ ಇಸ್ವಿ ಬಂದ ಒದಗಿ
ನೌಕ್ರಿ ಜನರಿಗೆ ಬಂದೀತಾಗ ಬಾಳ ಬಿಗಿ
ಇನ್ನು ಹೇಳತೇನ ಕೇಳ್ರಿ ಆದಂತಾ ಬಗಿ ||
ಮೀರಿದ ಚಳವಳಿಯಾಗಿ ಸೂರಿ ಆತ್ರಿ ನಾಡಮ್ಯಾಗ
ಕುತ್ತ ಬಂದ ಕವಿದೀತ ಬ್ರಿಟಿಷರಿಗಿ
ಪೋಲೀಸ ಪಾರ್ಟಿ ಬರತಿತ್ತ ನಮ್ಮ ತಿಗಡೊಳ್ಳಿಗಿ ||

ಚಿತ್ತಗೊಟ್ಟ ಕೇಳಿರಿನ್ನು ಸುತ್ತ ನಾಡಾನ ಜನಾ
ಸತ್ತಾರ ಬಲುಮಂದಿ ಗುಂಡಿಗಿ
ತುತ್ತ ಆಗಿ ಹೋದ್ರು ಫೌಜದಾರನ ಪಿಸ್ತೂಲಿಗಿ
ಬೈಲಹೊಂಗಲದಲ್ಲಿ ಹಾರಿತ್ರಪ್ಪಾ ಮದ್ದಿನ ಹೊಗಿ ||
ಜಯಭೇರಿ ನುಡಸುತ ಝೇಂಡಾ ಏರಸಾಕ ಹ್ವಾದ್ರು
ಜಡಾ ಬಂತ ದಡ್ಡಗೇಡಿ ಫೌಜದಾರಿಗಿ
ಗುಂಡ ಹೊಡೆದ ಬಿಟ್ಟ ಆಗ ಏಳ ಮಂದೀಗಿ ||

ಸತ್ತಾವರ ಮನ್ಯಾನ ಮಂದಿ ದಿಕ್ಕ ತಪ್ಪಿಕುಂತಾರ
ದುಕ್ಕಾ ಮಾಡತಿದ್ದರ ಒಳ್ಳೆ ಮರಮರಗಿ
ದುಕ್ಕ ತಡಿವಲ್ತ ಬರತಿತ್ತ ಹೆಚ್ಚಾಗಿ
ಅಳುತ ಕುಂತಾರ ಕಣ್ಣೀರ ಚೆಲ್ಲಿ ಧರಣೀಗಿ ||
ಬೆಳಗಾಂವಿಗೆ ತಾರ ಹೋತ ತಡಾ ಇಲ್ಲದ ಪಾರ್ಟಿಬಂತ
ಒಂದೋ ಬಸ್ತಿ ಇಟ್ಟಾರಾಗ ಕಚೇರಿಗಿ
ಇಲ್ಲಿ ವಲ್ಲೇನಂದ ವರ್ಗ ಆತ ಫೌಜದಾರಿಗಿ ||

ಸ್ಟೈಲ ಬಿಡಲಿಲ್ಲ ಜನಾ ಲೈನಹಾದಿ ಪೂಲ ಮತ್ತ
ತಾರ ಕಂಬ ಹೋದುವರಿ ಹಾಳಾಗಿ
ಭಯಾ ಬರಲಿಲ್ಲ ಆವಾಗ ಯಾರ್‍ಯಾರಿಗಿ
ಟೋಳಿ ಟೋಳಿ ಆಗಿ ತಿರಗತಿದ್ರು ಹಳ್ಳಿ ಹಳ್ಳಿಗಿ ||
ಇಳೆಯೊಳು ವಂದs ಸವನ ಕಾಳಗವಿತ ಚಳವಳಿ
ಗೋಳ ಬಂತ ಬಿಳಿಮೋತಿ ಫಿರಂಗೇರಿಗಿ
ಕಂಬಾ ಕಾಯಲಿಕ್ಕೆ ಕಾವಲಾ ಇಟ್ರು ಲೈನ ಹಾದಿಗಿ ||

ಒಂದನೇ ಚಾಲ – ದಪ್ತರ ಗಂಟ ಏನ ಉಳಿಲಿಲ್ಲ ಸುಟ್ಟ ಹೋದು ಎಲ್ಲಾ
ಸಣ್ಣ ದೊಡ್ಡ ಪುಸ್ತಕ ಕಾಗದಾ
ಕುಲಕರ್ಣಿ ಕೊಡತಿದ್ರಪ್ಪಾ ತಗದಾ ||

ವಾಲಿಕಾರ ಕೈಯಾನ ಪತಿಯಾರ ಬಾಳ ತಯ್ಯಾರ
ಇದ್ದುವ ಒಂದೊಂದಾ
ತಂದ ಕೊಡತಿದ್ರು ತಾಂವಾಗಿ ಬಂದಾ ||

ಎರಡನೇ ಚಾಲ – ರಾಯಫಲ್ಲ ಇದ್ದವು ಪೋಲೀಸರ ಕೈಯಾಗ
ಖಾರಾ ಒಗದ್ದಾರಿ ಅವರ ಕಣ್ಣಾಗ ||
ರಾಯಫಲ್ಲ ಕಸಗೊಂಡ ಓಡ್ಯಾರ ಸಿಗದಾಂಗ
ಹಿಂಗ ನಡದಿತ್ತ ಸುತ್ತವರದ ನಾಡಾಗ ||

ಏರ – ಹಿಂದುಸ್ತಾನದ ಮಂದಿ ಕೂಡಿ ಹಿಂದ ಮುಂದ ನೋಡಲಿಲ್ಲ
ದಿಂಗ ಹಚ್ಚಿ ಬಿಟ್ಟಿದಾರ ಇಂಗ್ಲಿಸರಿಗಿ
ಏನ ಬಂದೀತಂತಾರ ಅವರು ಕಾಲ ಒದಗಿ
ಅಳತಿ ಹಾಕತಾರ ಹರಿವಲ್ತ ಆಗ ಅವರಿಗಿ ||

ಮೀರಿದ ಚಳವಳಿಯಾಗಿ ಸೂರಿ ಆತ್ರಿ ನಾಡಮ್ಯಾಗ
ಕುತ್ತ ಬಂದ ಕವದೀತ ಬ್ರಿಟಿಷರಿಗಿ
ಪೋಲೀಸ್ ಪಾರ್ಟಿ ಬರತಿತ್ತ ನಮ್ಮ ತಿಗಡೊಳ್ಳಿಗಿ ||೧||

ಏಳೆಂಟ ಊರಮಂದಿ ಕೂಡಿ ಟೋಳಿ ಆಗಿ ನಡವಾರ
ರೇಲ ಹಳಿ ತಾರ ಕಂಬ ಕೀಳೋದಕ
ಸ್ಟೇಶನ್ ತಿಜೂರಿ ಟೆಲಿಫೋನ್ ಒಡಿಯುದಕ
ಹಿಂಗ ಮಸಲತ್ತು ಮಾಡಿ ಹೊಂಟ್ರು ಮಲ್ಲಾಡಕ ||
ಸಣ್ಣ ದೊಡ್ಡ ಮಂದಿ ಕೂಡಿ ಗುದ್ದಾ ಹಿಡದ ನಡವಾರ
ತಾವರಗಟ್ಟಿ ನಾಗರಗಾಳಿ ಅಲ್ಲಾವರಕ
ಎಲ್ಲಾ ಧ್ವಂಸ ಮಾಡಿ ಬಂದಾರ ಆ ಕ್ಷಣಕ ||

ಸರಕಾರಿ ಸಾಲಿ ಬಿಡಲಿಲ್ಲ ಹಾಜರಿ ಬುಕ್ಕ ಖುರ್ಚಿಮೇಜ
ಎಣ್ಣಿಗೊಜ್ಜಿ ಸುಟ್ಟಾರ ಅದಕ್ಕಿಲ್ಲ ಲೆಕ್ಕ
ಸಿಂದಿ ಸೆರೇದಂಗಡಿ ಸೇರಿವ್ಯಾಗಿ ಬಿದ್ದು ನೆಲಕ
ಇನ್ನೂ ಏನೇನ ಮಾಡೂಣುತ ಹಾಕತಾರ ಲೆಕ್ಕ ||
ಟಪಾಲ ಮೋಟೋರ ಎಲ್ಲಾ ಲೂಟಿಮಾಡಿ ಕಳಿಸಿದಾರ
ಬರೇ ಗಾಡಿ ಹೋತ ಪೋಸ್ಟ ಆಫೀಸಕ
ಚಾವಡಿ ಬಂಗಲೆಗಳು ಸುಟ್ಟ ಬಿದ್ದುವ ನೆಲಕ ||

ತೂಕಾ ತಗದ ನಡದಾರ ತೋಲಿಗಿ ಇರಸಾಲ ಬಡಿಯೂದಕ್ಕ
ಪೋಲೀಸ ಪಾರ್ಟಿ ಇತ್ತ ಬಂದೂ ಬಸ್ತಿ ಮಾಡೂದಕ
ಸೋಗ ಹಾಕಿ ಹೋಗಿ ಕುಂತ್ರ ಪಾಳೆ ಕೊಡೋದಕ
ಪಾರಾ ಮಾಡಾವನ್ನ ಹಿಡದಾರ ರಿಕ್ಕ ಮುಕ್ಕ ||
ಬಂದ ಹೊಕ್ಕೀತ ಮಂದಿ ಹಿಂದ ಮುಂದ ನೋಡಲಿಲ್ಲ
ಬಂದೂಕ ಬಾನೆಟ್ ತಗೊಂಡ್ರ ತಮ್ಮ ತಾಬಾಕ
ಗುಡಗ ಹೊಡಿತಿತ್ತ ಗುಂಡಿನ ಮಳಿಗೆ ಇಲ್ಲ ಲೆಕ್ಕ ||

ಗಾಬರಿಯಾಗಿ ಹವಾಲದಾರ ಗಂಟ್ಲಾ ಬಿಡರಿ ಅಂತಾನ
ಕೋಟ ಪಾಟ್ಲೋಣ ಕಳದ ಕೊಟ್ರ ಒಂದ ಹೊಡತಕ್ಕ
ಪೋಲೀಸರು ಓಡಿಹೋಗಿ ಕುಂತಾರ ಚಾದಂಗಡಿ ಹೊಕ್ಕ
ಗದ್ಲಾ ನೋಡಿ ಬರಲಿಲ್ಲ ಅವರು ಎದ್ದ ಮುಂದಕ ||
ಕಾಡತೋಸ ಕಾಗದ ಪತ್ರ ರೂಪಾಯಿ ರೊಕ್ಕ ಲೂಟಿಮಾಡಿ
ತಡವಿಲ್ಲದೆ ಹೊಳ್ಳಿ ಬಂದ್ರ ತಟ್ಟಿಹಳ್ಳಕ್ಕ
ರೂಪಾಯಿ ತಂದಿದ್ರ ನಾಲ್ಕು ನೂರಾ ಐವತ್ತನಾಲ್ಕ ||

ಸುತ್ತಹಳ್ಳಿ ಕುಲಕರ್ಣೇರು ಸಾಕಷ್ಟು ರೂಪಾಯಿ
ಗಪ್ಪ ಮಾಡಿ ಇಟ್ಟಕೊಂಡ್ರ ತಮ್ಮ ತಾಬಾಕ
ಕಾಗದ ಪತ್ರ ಉಳಿಯಲಿಲ್ಲ ಲೆಕ್ಕಾ ತೋರಿಸೋದಕ
ಬಂದ ಮಂದಿ ಬಡದ ಓದರಂತ ಮಾಡತಾರ ದುಕ್ಕ ||
ಚಳವಳಿ ಮಂದಿಮ್ಯಾಗ ಚಾಡಾ ಹೇಳಿ ಉಳಕೊಂಡಾರ
ಮಿಲ್ಟ್ರಿಗಾಡಿ ಬಂದು ಇರಸಾಲ ಒಯ್ಯಾಕ
ಹೊಳ್ಳಿ ಹೋಗಿದಾವ ಹಣಾ ಅಲ್ಲಿ ಇಲ್ಲದಕ್ಕ ||

ಒಂದನೇಚಾಲ – ಗುಂದಿಗವಾಡದಲ್ಲಿ ಮಾತಾಡತಾರ ಕುಂತ ಮಾಡ್ಯಾರ ಮಸಲತ್ತ
ಹೊಂಟ ಹೋದ್ರ ಆಗಿ ತಯ್ಯಾರಾ
ಮೂರು ಸಂಜಿಕ ಮುಟ್ಯಾರ್ಯ ಅಳ್ನಾವರಾ ||

ಬ್ಯಾಂಕಿನಲ್ಲಿ ಇರುವಂತಾ ರೊಕ್ಕ ಮುರಿದಾರ ಸಂದಕ
ನಾಲ್ವತ್ತ ಸಾವಿರಾ
ತಗೊಂಡಾರ ಮಾಡಿ ಅವಸರಾ ||

ಎರಡನೇ ಚಾಲ – ಹೊಳ್ಳಿ ಹೋದಾರ ಬೈಲಹೊಂಗಲಕ
ದೊಡ್ಡ ಬ್ಯಾಂಕ್ ಒಡಿಬೇಕಂತ ಲೆಕ್ಕ ||

ತಿಜೂರಿ ಕೈ ಸಿಗಲಿಲ್ಲ ವ್ಯಾಳ್ಯೇಕ
ಬಾಳ ಗೋರ ಬಿಟ್ರಾರ ಬೆಳತನಕ ||

ಹಣಾ ಸಿಗಲಿಲ್ಲ ಅವರಿಗೆ ಹೊಡಿಯೋದಕ
ಗಡ ಬಡದಿಂದ ಬಂದಾರ ಹಿಂದಕ ||

ಏರ – ತಿಗಡೊಳ್ಳಿ ಸೊಸೈಟಿ ಲೂಟಿ ಆದ ಸುದ್ದಿ ಕೇಳಿ
ಡಿಎಸ್ಪಿ ಫೌಜದಾರ ಹೊಂಟ್ರ ತಪಾಸಿಗಿ
ಮೋಟೋರ ಬಿಟ್ಟಿದ್ರ ಬಸರಕೊಡದ ಅಗಸಿಗಿ
ಅದನ್ನ ಹೇಳ ಬೇಕಂದ್ರ ಬರತೈತಿ ನಗಿ ||

ಮೀರಿದ ಚಳವಳಿಯಾಗಿ ಸೂರಿ ಆತ್ರಿ ನಾಡಮ್ಯಾಗ
ಕುತ್ತ ಬಂದ ಕವದೀತ ಬ್ರಿಟಿಷರಿಗಿ
ಪೋಲೀಸ್ ಪಾರ್ಟಿ ಬರತಿತ್ತ ನಮ್ಮ ತಿಗಡೊಳ್ಳಿಗಿ || || ೨ ||

ಲೈನ ಇಲ್ಲ ತಿಗಡೊಳ್ಳಿಗಿ ಕಾಲಹಾದಿ ಓಡದ ಬಂದ್ರ
ಗೌಡ್ರ ಮನಿಯಲ್ಲಿ ಇಳಕೊಂಡ್ರ ಎಲ್ಲಾ ಜನರಾ
ಫೌಜದಾರ ರೊಟ್ಟಿಗೆದ್ದ ಬೈಯತಿದ್ದ ಇಲ್ಲ ದರಕಾರಾ
ಊಟಕ್ಕ ಕೇಳತಿದ್ದ ಬೆಣ್ಣಿ ಹಾಲ ಮಸರಾ ||
ಗೊತ್ತ ಇಲ್ಲ ಇವರಿಗೆ ಬತ್ತದ ವಣಾ ಹುಲ್ಲ ಒಟ್ಟಿ
ವತ್ತರದಿಂದ ಸುಟ್ಟ ಬಿಟ್ರ ಮೋಟೋರಾ
ನೋಡಿ ದಿಕ್ಕೆಟ್ಟ ಓಡಿ ಹ್ವಾದ ಡ್ರಾಯವರಾ ||

ಊಟಕ್ಕ ಕುಂತಿತ್ತ ಪೋಲೀಸ ಮಂದಿ ಬಂತ ಮೋಟೋರ ಸುಟ್ಟ ಸುದ್ದಿ
ಅಗದಿ ಆಳಾಪಮಾಡಿ ಹೇಳತಾನ ಡ್ರಾಯವರಾ
ತಾನು ತಿವಕೊಂಡಿದ್ದ ಹಾಯತಿತ್ತ ನೆತ್ತರಾ
ಎದ್ದ ಎದಿ ಎದಿ ಗುದ್ದಿಕೊಂಡ್ರ ಡಿಎಸ್ಪಿಯವರಾ
ಊಟಾ ಮಾಡೂ ಮುಸುರಿ ಕೈ ಪಾಟ್ಲೋಣಕ ತಿಕ್ಕಿಕೊಂಡ
ದಿಕ್ಕೆಟ್ಟ ಓಡತಾರ ಇಲ್ಲ ಖಬರಾ
ಹ್ಯಾಂಟ ಬಿಟ್ಟ ಹ್ವಾದ್ರ ಅವಸರಾ ||

ಒತ್ತರಲೆ ಓಡುವಾಗ ತತ್ಕ್ಯಾಡಿ ಬೀಳತಿದ್ದ ಸಾಬ
ಫಾಯರ್ ಫಾಯರ್ ಅಂತಾನ ಅಂಜಿ ಆಗಿ ನೀರಾ
ಅರ್ಧಾ ತಾಸಿನೊಳಗ ಬಸರಕೊಡ ಮುಟ್ಟಿದರಾ
ಹೋಗೋವರೊಳಗ ಉಳಿದಿದ್ದಿಲ್ಲ ಮೋಟೋರಾ ||
ಇವರಿಗೆ ಸಿಕ್ಕವರನ್ನ ಬಲ್ಲಂಗ ಬಡಿತಿದ್ದರ
ಹೆದರಿ ಓಡ್ಯಾರ ಎಷ್ಟೋ ಜನರಾ ||

ಬೆಳಗಾಂವಿ ಕಲೆಕ್ಟರ ಮುಂದ ನಿಂತ ಅತ್ತತ್ತ ಹೇಳತಾನ
ದೇಗಾಂವ ತಿಗಡೊಳ್ಳಿ ಯವರು ಸುಟ್ರು ನನ್ನ ಮೋಟೋರಾ
ಅವರಿಗೆ ಮದತ್ತ ಮಾಡಿದಾರ ಬಸರಕೊಡದವರಾ
ಈಗ ಬೇಡೋದಕ್ಕ ಬಂದಿದೇನ ಹೆಚ್ಚಿನ ಅಧಿಕಾರಾ ||
ಮೂರೂ ಊರಿಗೆ ಕೂಡಿ ಮೂರ ತಾಸ ಮುದ್ದತ ಕೊಡ್ರಿ
ಗನ್ನ ಮೆಶಿನ್ ಹಚ್ಚಿ ಮಾಡತೇನ ಸಂಹಾರ
ಕೊಟ್ಟ ನೋಡ್ರಿ ಅಧಿಕಾರ ಒಂದ ಜರಾ ||

**ಒಂದನೇ ಚಾಲ –** ಇಬ್ರೂ ಕೂಡಿ ಹ್ವಾದ್ರ ಮುಂಬೈಕ ಗೌರ್ನರನ ಹಂತೇಕ
ನಾವು ಮಾಡಬೇಕ ಇನ್ನೇನಾ
ಹೆಚ್ಚಾಗೇತ್ರಿ ಚಳವಳಿ ಒಂದ ಸವನಾ ||

ಗೌರ್ನರ ಹೇಳ್ಯಾನ ತತ್ಕಾಲಕ ಇಸಕೊಳ್ರಿ ಅವರ ಬಂದೂಕ
ಹಿಂಸಾ ಮಾಡಬ್ಯಾಡ್ರಿ ಯಾರನ್ನಾ
ಹಿಡದ ಜೇಲಿಗ್ಹಾಕರಿ ಎಲ್ಲರನಾ ||

**ಎರಡನೇ ಚಾಲ –** ಕಲಮ ಜಾರಿ ಆತ್ರಿ ನೂರಾ ನಾಲ್ವತ್ನಾಲ್ಕ
ಸಂಶೆ ಬಂದ್ರ ಅಡ್ಡಿ ಯಿಲ್ಲ ಹಿಡಿಯದಕ
ದಿಕ್ಕ ತಿಳಿಯಲಿಲ್ಲ ರಿ ಸರಕಾರಕ್ಕ
ಹುಚ್ಚರ್ಹಾಂಗ ತಿರಗ್ಯಾರ ಮಂದಿ ಓಡಿಯದಕ ||

**ಏರ –** ಅಧಿಕಾರ ಸಿಕ್ಕಿತಂತ ಅಡಬಡಿಸಿ ಮುಂಬಯಿಂದ
ಗಡಬಡಿಸಿ ಹೊಳ್ಳಿ ಬಂದ್ರ ಬೆಳಗಾಂವಿಗಿ
ಅಲ್ಲೆ ಕರಿಸಿಕೊಂಡ ಹೇಳತಾರ ಫೌಜದಾರಗಿ
ಇನ್ನ ಅಂಜೋದೇನ ಗರ್ಜ ಇಲ್ಲ ಯಾರ್‍ಯಾರಿಗಿ ||

ಮೀರಿದ ಚಳವಳಿ ಆಗಿ ಸೂರಿ ಆತ್ರಿ ನಾಡಮ್ಯಾಗ
ಕುತ್ತ ಬಂದ ಕವದೀತ ಬ್ರಿಟಿಷರಿಗಿ
ಪೋಲೀಸ ಪಾರ್ಟಿ ಬರತಿತ್ತ ನಮ್ಮ ತಿಗಡೊಳ್ಳಿ ಗಿ || || ೩ ||

ಏಳತಿಂಗಳ ಒಂದ ಸವನ ಕಾಳಗವಿತ ಚಳವಳಿ
ಬಾಳ ಜೋರಿನಿಂದ ಆಗಿತ್ತರಿ ಪ್ರಬಲ್ಲಾ
ಎಷ್ಟೋ ಪೋಲೀಸರು ಆಗಿ ಹೋದ್ರು ಬುಡಮೇಲಾ
ರಾಯಫಲ್ ಹೊತಗೊಂಡ ತಿರಗತಿದ್ರು ರಾತ್ರಿ ಹಗಲಾ ||
ತುರತಕ್ಕ ಅವರಿಗಿ ಯಾರ್‍ಯಾರು ಸಿಗಲಿಲ್ಲ
ಜನರನ್ನ ಬಡಿತಿದ್ರು ಕೇಳವರು ಯಾರಿಲ್ಲಾ
ಅದಕ ಅಳತಿಲ್ಲಾ ||

ವಡ್ಡ ಗೇಡಿ ಪೋಲೀಸರು ಮಡ್ಡಿ ಮಾಳಾ ಮೊದಲಮಾಡಿ
ವಡವಡ ತಿರಗತಾವ ಖಬರಿಲ್ಲಾ
ಗಿಡದ ಬಡ್ಡಿ ಮರಿಗಿ ನಿಂತ ನೋಡತಿದ್ವಿ ಇದನ್ನೆಲ್ಲಾ
ಪಾರ್ಟಿಮಂದಿ ಬಿಧರ ಬೆಟ್ಟಾ ಬಿಡಲಿಲ್ಲ ||
ಹೊಟ್ಟೆಕಿಚ್ಚಿನಿಂದ ಹುಡಕತಾವ ಹಾಂತವರವ
ಯಾರ್‍ಯಾರು ಅವರಿಗೆ ಸಿಗಲಿಲ್ಲಾ
ಹಸದ ಹಲ್ಲ ಕಿಸದ ನಿಂತಾವ ಕೂಳಿಲ್ಲಾ ||

ಊರಕೇರಿಗಿ ಹೋದವರನ್ನ ದಾರಿಯೊಳಗ ಹಿಡಿತಂದ
ಸಂಶೆ ಬಂದ ಬಡಿತಾರ ಅನುಮಾನ ಇಲ್ಲಾ
ದಾರಿ ನೋಡತಿದ್ರು ಮನಿಯಾಗ ಇನ್ನೂ ಬರಲಲ್ಲಾ
ಅವರನ್ನ ಹಿಡಿದಿರಬಹುದು ಅಂತಿದ್ರು ಜನರೆಲ್ಲಾ ||
ಬಂದ ಬಂದ ಮಿಲ್ಟ್ರಿ ಮಂದಿ ಹಿಂದ ಮುಂದ ನೋಡಾಕಿಲ್ಲ
ಕಂಡಾವರನ್ನ ಬಡಿತಿದ್ರು ಕುಂಡಿ ಮ್ಯಾಲಾ
ಹೊಡತಕ್ಕ ಮೈಯ್ಯಾಗೇನು ಕಸರ ಉಳಿಲಿಲ್ಲಾ ||

ಬಂದೂಕಿನ ಸಲುವಾಗಿ ಸಂದಿಗೊಂದಿ ಉಳೀಲಿಲ್ಲ
ಗ್ವಾಡಿ ಹೆಂಡಿ ಕಿತ್ತ ಹುಡುಕತಾರ ಮನಿಯೆಲ್ಲಾ
ನೀರಿನ ಹಂಡಗಳ ಉಳಿಸಿದಾರ ಕೊಡ ಮೊದಲಾ
ಬತ್ತದ ಕಣಜಾ ಕಿತ್ತ ಮಾಡಿದಾರ ಬುಡಮೇಲಾ ||
ಹರಕ ಗಳಿಗಿ ಹಳಿ ಹರವಿ ಅರವಿ ಅಂಚಡಿ ಹರಿವ್ಯಾಡತಾರ
ಕಾಡತೂಸ ಅದಾವಂತ ಅಡಕಲಗಡಿಗಿ ಉಳಿಲಿಲ್ಲ
ಆಗ ಮುಂದ ನಿಂದ್ರೋ ಧೈರ್ಯ ಯಾರಿಗಿದ್ವಿಲ್ಲಾ. ||

**ಒಂದನೇ ಚಾಲ** – ಮರಿಗಿ ಬ್ಯಾನಿ ಬಂದ ಹೊಕ್ಕಂಗ ಎಲ್ಲಾ ಊರೊಳಗ
ಬಂದ ಮಾಡತಿದ್ರೋ ಧುಮಸೇನಾ
ಖಬರ ಹಾರಿ ಓಡ್ಯಾಡತಿದ್ರು ಜನಾ ||

ಎಲ್ಲಾ ಮಂದಿಗೆ ಹೊಕ್ಕಿತರಿ ತಗಿಬಗಿ ಬಂದಿತರಿ ಬಿಗಿ
ಸಿಗವಲ್ತ ಪರಾರಿಯ ಜನಾ
ತಗೊಂಡ ಹ್ವಾದ್ರ ಅಣ್ಣ ತಮ್ಮರನಾ ||

ಎರಡನೇ ಚಾಲ – ತಿರಗತಾವ ಸುತ್ತೂರದ ಆಗಿ ಗೋಳಾ
ನಮ್ಮನ್ನ ಹುಡಿಕಿ ಸತ್ತಾವ ಪೋಲೀಸ್‌ಗೋಳಾ ||
ಹಳ್ಳಿ ಒಳಗಿನ ಸಾವಕಾರ ಶೆಟ್ಟಿಗಳಾ
ಅಂಜಿ ಬಿಟ್ಟಾರ ತಮ್ಮ ಮನಿಗಳಾ ||

ಏರ – ಪಿರಂಗೇರ ಬೆನ್ನ ಹತ್ತಿ ಫಿತೂರಿ ಮಾಡೋಮಂದಿ
ಹಾಂತವರದ ತಿರಗತಿದ್ರ ಹಳ್ಳಿಹಳ್ಳಿಗಿ |
ಒಬ್ಬ ಸಿ ಐ ಡಿ ಬಂದ ಸಿಕ್ಕಿದ್ದ ತಿಗಡೊಳ್ಳಿಗಿ
ಅವನ್ನ ಪಾಡಾಗಿ ಜಡದ ಕಳಿವ್ಯಾರ ತಿರುಗಿ ||

ಮೀರಿದ ಚಳವಳಿ ಆಗಿ ಸೂರಿ ಆತ್ರಿ ನಾಡಮಾಗ
ಕುತ್ತ ಬಂದ ಕವದೀತ ಬ್ರಿಟಿಷರಿಗಿ
ಪೋಲೀಸ ಪಾರ್ಟಿ ಬರತಿತ್ತ ನಮ್ಮ ತಿಗಡೊಳ್ಳಿಗಿ || ೪ ||

ದಿಕ್ಕ ತಪ್ಪಿ ಮಿಲ್ಟ್ರಿ ಮಂದಿ ಲೆಕ್ಕತಪ್ಪಿ ತಿರಗತಾರ
ತಿಂದೇವಂತಾವ ಕೂಳಇಲ್ಲ ಹೊಟ್ಟಿಗಿ
ಮಜ್ಜಿಗಿ ಬೇಡತಾವ ಮನಿಹೊಕ್ಕ ತಾವಾಗಿ
ಕಾವ ಆಗೇತಂತ ನಿಂತಗೊಂಡ ಕಾಲ್ವೋಗಿ
ಪರಾರಿ ಇದ್ದ ಮಂದಿ ಪತ್ತೆ ಹತ್ತಲಿಲ್ಲ
ಅವರ ಸಂಬಂಧಿಕರ್ನ ಹಾಕ್ಯಾರ ಜೇಲಿಗಿ
ಭಯಾ ಬಂತಾಗ ಎಲ್ಲಾರಿಗ ||

ಬಿಕ್ಕಟ್ಟ ಬಂತ ಎಲ್ಲಾರಿಗೆ ಪುಕ್ಕಟ್ಟ ನಮ್ಮ ಮಂದಿ ಓದ್ರ
ಹಾಜರಾಗಿ ಬಿಡಸೋಣ ಂದ್ರ ತಾವಾಗಿ
ಹೊಂಟಹೋಗಿ ಭೆಟ್ಟಿ ಆದ್ರ ಫೌಜದಾರಿಗಿ
ಎಷ್ಟೋ ಮಂದಿನ್ನ ಹಿಡದಿದ್ದರ ಅಷ್ಟೊತ್ತಿಗಿ ||
ಬಡದು ಹೊಡದು ಮಾಡಬ್ಯಾಡ್ರಿ ಖರೆ ಖರೆ ಹೇಳತೇವ
ಮಾಡಿದಂತಾ ಗುನ್ನಾ ಎಲ್ಲಾ ಇಲ್ಲಿವರಿಗಿ
ಹಿಂಗ ಆದೀತಂದ ತಿಳಿಲಿಲ್ಲ ಮೊದಲೀಗಿ ||

ಹಿಂದ ಓದ ಬಂದೂಕ ತಂದ ಕೊಡತೇವಂತ
ಒಂದೂ ಬಿಡದ ಓದಕೊಟ್ರ ತಾವಾಗಿ
ಮುಂದ ಖಟ್ಲೆ ಹಾಕಿ ಕಳಿವಿದಾರ ಜೋರಿಗಿ

ಹಿಂಗ ನಡದಿತ್ತ ನಾಡತುಂಬ ಸುತ್ತೂರಗಿ ||
ಜೇಲಿನೊಳಗ ಕಾಲಿಇಟ್ಟ ಊಟಾ ಹಾಕತಿದ್ರ ನಮಗ
ಗೋದಿರೊಟ್ಟಿ ಬೆಲ್ಲಾ ಐತಾರ ಸಂಜಿಗಿ
ಉಲ್ಲನ ಕಂಬಳಿಕೊಡತಿದ್ರ ಮಲಗೊ ಸಲುವಾಗಿ ||

ಹೆಡ್ ಕ್ವಾರ್ಟರ್ ಹಿಂಡಲಗಿ ಜೇಲ ಕಿಲ್ಲಾದೊಳಗ ಕಾಲಿ ಇಲ್ಲ
ಪಾರ್ಟಿ ಕಳವಿಕೊಟ್ರ ಎರೋಡಾ ಇಸಾಪುರ ಜೇಲಿಗಿ
ನಾಶಿಕ ಕಾರವಾರ ರತ್ನಾಗಿರಿಗಿ
ಅಲ್ಲಿ ಮಂದಿನ್ನ ತರತಿದ್ರ ಇಲ್ಲಿಗಿ ||
ಕಟಪಟ ಮಾಡಿ ಕೋರ್ಟಿನೊಳಗ ಖಟ್ಲೆ ನಡಸಿದಾರ
ಜಡಜಿ ಸಾಹೇಬರ ಎದುರಿಗಿ
ನಿರ್ದೋಷಿ ಆದ್ರೂ ಡಟಿನ್ಯೂ ಆತ ಎಲ್ಲಾರಿಗಿ ||

**ಒಂದನೆ ಚಾಲ** – ಮುಂಜಾನೆ ಗಂಜಿಕೊಡತಿದ್ರ ಏಳು ಘಂಟೇಕ
ಕೊರತಿಲ್ಲ ಯಾವುದಕ
ಬ್ಯಾಳಿರೊಟ್ಟಿ ಊಟ ಮಧ್ಯಾಹ್ನಕ ||

ಚಹಾಪುಡಿ ಸಕ್ಕರಿ ಹಾಲ ಭೈಮಂಗ ಬೆಲ್ಲ
ಎರಡೂ ವೆಳ್ಳೇಕ
ಬಾಜಿ ರೊಟ್ಟಿ ಬ್ಯಾರೆ ಸಂಜೀಕ ||

**ಎರಡನೇ ಚಾಲ** – ಔಷಧ ಕೊಡತಿದ್ರ ಇದ್ದಲ್ಲಿಗೆ ತಂದಾ
ಸೋಡಾ ಸಾಬೂನ ಒಮ್ಮೆ ಎಂಟದಿನದ್ದಾ ||

ಪತ್ರಾ ಬರಿಲಿಕ್ಕೆ ಕಾರ್ಡ ವಾರಕ್ಕೊಂದಾ
ಹಿಂದಿ ಕಲತೇವ ನಾವು ಅಂದಾ ||

ಏರ – ಸದ್ದೆ ಆದದ್ದನ್ನ ತಿದ್ದಿ ತಿದ್ದಿ ತಿಳದಷ್ಟ ಹೇಳತೇನ
ತಿಗಡೊಳ್ಳಿ ಬಲಭೀಮನ ಚರಣಕ್ಕೆರಗಿ
ನಾಲ್ವತ್ತ ನಾಲ್ಕರೊಳಗ ಬಿಡಗಡಿ ಆತ ಎಲ್ಲಾರಿಗಿ
ಪದಾ ಮಾಡಿದಾನ ಮರಕಲ್ಲ ಹೊಸದಾಗಿ ||

ಮೀರಿದ ಚಳುವಳಿಯಾಗಿ ಸೂರಿ ಆತಿ ನಾಡ ಮ್ಯಾಗ
ಕುತ್ತ ಬಂದ ಕವಿದೀತ ಬ್ರಿಟಿಷರಿಗಿ
ಪೋಲೀಸ ಪಾರ್ಟಿ ಬರತಿತ್ತ ನಮ್ಮ ತಿಗಡೊಳ್ಳಿಗಿ || ೫ ||

(ಅಪ್ರಕಟಿತ)

---

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ.

ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇ ದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶೀ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶ ಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, ಅದನ್ನು ತನ್ನ ಪ್ರಸಾರಾಂಗದ ಮೂಲಕ ಪ್ರಧಾನವಾಗಿ ಪೂರೈಸುತ್ತಲಿದೆ. ಈ ನಿಟ್ಟಿನಲ್ಲಿ ಪ್ರಕಟವಾದ ಮಂಟಪ ಮಾಲೆಯ ಪುಸ್ತಕ 'ಸ್ವಾತಂತ್ರ್ಯ ಹೋರಾಟ ಮತ್ತು ಜನಪದ ಸಾಹಿತ್ಯ.'

ಡಾ. ಬಸವರಾಜ ಮಲಶೆಟ್ಟಿ ಅವರು ಸಂಕೇಶ್ವರದ ಕಲಾ ವಿಜ್ಞಾನ ಮಹಾವಿದ್ಯಾಲಯದಲ್ಲಿ 'ಸ್ವಾತಂತ್ರ್ಯ ಹೋರಾಟ ಮತ್ತು ಜನಪದ ಸಾಹಿತ್ಯ' ಕುರಿತು ಮಂಟಪ ಮಾಲೆ ಉಪನ್ಯಾಸವನ್ನು ನೀಡಿದ್ದಾರೆ. ಇದಕ್ಕಾಗಿ ಅವರಿಗೆ ಕನ್ನಡ ವಿಶ್ವವಿದ್ಯಾಲಯ ಕೃತಜ್ಞವಾಗಿದೆ.

ಡಾ. ಎಂ.ಎಂ.ಕಲಬುರ್ಗಿ
ಕುಲಪತಿಗಳು

---

ಮಂಟಪ ಮಾಲೆ- ೩೯

---